KA / BG-GPO/2515/WPP-47/2006-2008 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಫೆಬ್ರವರಿ ೨೩, ೨೦೦೬ (ಫಾಲ್ಗುಣ ೪, ಶಕ ವರ್ಷ ೧೯೨೭) | ಸಂಚಿಕೆ ೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಕರ್ನಾಟಕ**
**4ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು-560 041**
**ಅಧಿಸೂಚನೆ**
**ಸಂಖ್ಯೆ: ಆರ್‌ಇಜಿ/ ಜಿಇಎನ್/ 237/ 2006-07, ದಿನಾಂಕ:10ನೇ ಫೆಬ್ರವರಿ, 2006**

**ವಿಷಯ :** ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ 8ನೇ ವಾರ್ಷಿಕ ಘಟಿಕೋತ್ಸವದ ಬಗ್ಗೆ.

**ಉಲ್ಲೇಖ :** ಘನತೆವೆತ್ತ ಕುಲಾಧಿಪತಿಗಳು ಹಾಗೂ ರಾಜ್ಯಪಾಲರ ಕಾರ್ಯದರ್ಶಿಯವರ ಪತ್ರ ಸಂಖ್ಯೆ: ಜಿಎಸ್ 17 ಕೆಹೆಚ್‌ಎಮ್ 2005, ದಿನಾಂಕ: 02.12.2005.

ಘನತೆವೆತ್ತ ಕುಲಾಧಿಪತಿಗಳು ಹಾಗೂ ರಾಜ್ಯಪಾಲರು, ಕರ್ನಾಟಕ ಇವರ ಅನುಮೋದನೆ ಮೇರೆಗೆ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ 8ನೇ ವಾರ್ಷಿಕ ಘಟಿಕೋತ್ಸವವನ್ನು ದಿನಾಂಕ: **3ನೇ ಮಾರ್ಚ್ 2006ರಂದು ಶುಕ್ರವಾರ ಪೂರ್ವಾಹ್ನ 11.00 ಗಂಟೆಗೆ** ಧನ್ವಂತರಿ ಸಭಾಂಗಣ, ರಾ.ಗಾ.ಆ.ವಿ. ವಿಶ್ವವಿದ್ಯಾಲಯ, ಬೆಂಗಳೂರು ಇಲ್ಲಿ ಏರ್ಪಡಿಸಲಾಗಿದೆ.

ಡಾ: ಕೆ. ಮೋಹನ್‌ದಾಸ್, ನಿರ್ದೇಶಕರು, ಶ್ರೀ ಚಿತ್ರ ತಿರುನಾಳ್ ಇನ್ಸ್ಟಿಟ್ಯೂಟ್ ಫಾರ್ ಮೆಡಿಕಲ್ ಸೈನ್ಸ್‌ಸ್ ಅಂಡ್ ಟೆಕ್ನಾಲಜಿ, ತಿರುವನಂತಪುರ-695 011 ಇವರು ಘಟಿಕೋತ್ಸವ ಭಾಷಣ ಮಾಡಲಿರುವರು.

**ವಿ.ಈ. ಹುಕ್ಕೇರಿ**
ಕುಲಸಚಿವರು.

**RAJIV GANDHI UNVIERSITY OF HEALTH SCIENCES, KARNATAKA**
**4th 'T' Block, Jayanagar, Bangalore-560 041**
**NOTIFICATION**
**No. REG/ GEN/ 237/ 2006-07, Dated: 10th February, 2006**

**Sub:** Rajiv Gandhi University of Health Sciences- 8th Annual Convocation-Reg.

**Ref :** Letter from the Secretary to His Excellency the Chancellor and Governor vide letter No. GS 17 KHM 2005 Dated: 2nd december, 2005.

Pursuant to the approval of His Excellency the Chancellor and the Governor of Karnataka, the 8th Annual Convocation of Rajiva Gandhi University of Health Sciences will be held on Friday the 3rd March 2006 at 11.00 a.m. at Dhanvatari Hall of RGUHS.

Dr. K. Mohandas, Director, Sree Chitra Tirunal Institute for Medical Sciences and Technology, Thiruvanantapura-695 011 will be the Chief Guest and deliver the Convocation Address.

**V.E. HUKKERI**
REGISTRAR.

PD-27

## ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು, ಇವರ ನಡವಳಿಗಳು

## ಸಂಖ್ಯೆ: ಸಮಾಪನೆ/ 81/ ಇತರೆ/ 2001-02, ದಿನಾಂಕ:25ನೇ ಜನವರಿ, 2006

**ವಿಷಯ :** ದಿ ವಾಟರ್ ಟ್ರಾನ್ಸ್ ಪೋರ್ಟ್ ಕೋ- ಆಪರೇಟಿವ್ ಸೊಸೈಟಿ ನಿ, ಕಾರವಾರ, ಇದರ ಸಮಾಪನೆ ಕುರಿತು.

**ಉಲ್ಲೇಖ :**
1. ಸಹಕಾರ ಸಂಘಗಳ ಉಪ ನಿಬಂಧಕರು (ಉತ್ತರ ಕನ್ನಡ) ಕಾರವಾರ ರವರ ಪತ್ರ ಸಂಖ್ಯೆ: ಡಿಆರ್ಎಸ್/ ಜೆ/ ಎಲ್ಕ್ಯೂಡಿ/ 165/ 99-2000 ದಿನಾಂಕ: 30.11.99.
2. ಈ ಕಛೇರಿಯ ಇದೇ ಕ್ರಮಾಂಕದ ನೋಟೀಸು ದಿನಾಂಕ: 17.12.99.
3. ಆಡಳಿತ ಮಂಡಳಿಯ ಸದಸ್ಯರ ಮನವಿ ಪತ್ರ ಸಂಖ್ಯೆ: ಕೆಡಬ್ಲ್ಯೂಟಿ/ ಸಿಆರ್/ 5/ 98-99, ದಿನಾಂಕ: 01.02.2000.
4. ಈ ಕಛೇರಿಯ ಸಮಸಂಖ್ಯೆಯ ದಿನಾಂಕ: 03.05.2000ರ ಪತ್ರ.
5. ಈ ಕಛೇರಿಯ ಸಮಸಂಖ್ಯೆಯ ದಿನಾಂಕ: 15.07.2000ರ ಸೂಚನಾ ರದ್ದತಿಯ ಆದೇಶ.
6. ಸ.ಸಂ.ಉಪ ನಿಬಂಧಕರು ಪತ್ರ ಸಂಖ್ಯೆ: ಡಿಆರ್ಎನ್/ ಜಿ-ಎಲ್ಕ್ಯೂಡಿ/ 165/ 99-2000 ದಿನಾಂಕ: 26.06.2000, 01.08.2000, 31.08.2000, 14.11.2000 ಮತ್ತು 30.07.2001.
7. ಈ ಕಛೇರಿಯ ಸಮಸಂಖ್ಯೆಯ ಸೂಚನಾ ಪತ್ರ ದಿನಾಂಕ:25.07.2002.
8. ಸ.ಸಂ. ಉಪ ನಿಬಂಧಕರು (ಉತ್ತರ ಕನ್ನಡ) ಕಾರವಾರ ರವರ ಪತ್ರ ಸಂಖ್ಯೆ: ಡಿಆರ್ಎನ್/ ಎಲ್ಕ್ಯೂಡಿ/ ಸಿಆರ್/37/ 04-05 ದಿನಾಂಕ: 08.10.2004.

**ಪೀಠಿಕೆ:**

ದಿ ವಾಟರ್ ಟ್ರಾನ್ಸ್ ಪೋರ್ಟ್ ಕೋ-ಆಪರೇಟಿವ್ ಸೊಸೈಟಿ ಲಿ, ಕಾರವಾರ, ಈ ಸಂಘದ ಕಾರ್ಯವ್ಯಾಪ್ತಿಯು ರಾಜ್ಯ ಮಟ್ಟದ್ದಾಗಿರುತ್ತದೆ. ಸಂಘವು ಮೂಲ ಉದ್ದೇಶಗಳನ್ವಯ ಕಾರ್ಯವನ್ನು ನಿರ್ವಹಿಸದೇ ಸಂಘದ ಕಾರ್ಯಚಟುವಟಿಕೆಗಳನ್ನು ನಡೆಸುವಲ್ಲಿ ವಿಫಲವಾಗಿರುತ್ತದೆಂದು ತಿಳಿಸಿ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (1)ರನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ಕನ್ನಡ ಜಿಲ್ಲೆ ರವರು ಶಿಫಾರಸ್ಸು ಮಾಡಿದ್ದರ ಹಿನ್ನೆಲೆಯಲ್ಲಿ ಉಲ್ಲೇಖ (2)ರನ್ವಯ ನೋಟೀಸನ್ನು ಆಡಳಿತ ಮಂಡಳಿಗೆ ಜಾರಿಗೊಳಿಸಲಾಗಿತ್ತು. ಆಡಳಿತ ಮಂಡಳಿಯ ಸದಸ್ಯರು ಉಲ್ಲೇಖ (3) ರನ್ವಯ ಒಂದು ಮನವಿ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಬಾರದೆಂದು ಸಂಘವನ್ನು ಪುನಃ ಕಾರ್ಯರೂಪಕ್ಕೆ ತರಲು ಕೋರಿದ್ದರು. ಈ ಅಂಶಗಳನ್ನು ಪರಿಶೀಲಿಸಿ ಈ ಕಛೇರಿಯ ಉಲ್ಲೇಖ (4)ರ ಆದೇಶದನ್ವಯ ಉಲ್ಲೇಖ (2)ರಲ್ಲಿ ನೀಡಿದ ಸೂಚನಾ ಪತ್ರವನ್ನು ರದ್ದುಪಡಿಸಲಾಯಿತು. ತದನಂತರ ಸಹಕಾರ ಸಂಘಗಳ ಉಪ ನಿಬಂಧಕರು, ಕಾರವಾರ ರವರು ಉಲ್ಲೇಖ (6)ರ ದಿನಾಂಕ: 30.07.2001ರ ಪತ್ರದಲ್ಲಿ ಈ ಕಛೇರಿಯಿಂದ ಹೊರಡಿಸಲಾದ ಉಲ್ಲೇಖ (4)ರಲ್ಲಿ ಸಂಘವು ಮೂಲ ಉದ್ದೇಶಗಳನ್ವಯ ಕಾರ್ಯನಿರ್ವಹಿಸುವಲ್ಲಿ ವಿಫಲವಾದರೆ ಸಮಾಪನಾದೇಶವನ್ನು ಹೊರಡಿಸಲಾಗುವುದೆಂದು ತಿಳಿಸಿ, ಸೂಚನಾ ಆದೇಶವನ್ನು ರದ್ದುಗೊಳಿಸಲಾಗಿತ್ತು. ಮುಂದೆ ಉಲ್ಲೇಖ(6)ರ ದಿನಾಂಕ: 18.09.2001ರ ಪತ್ರದಲ್ಲಿ ಸಂಘವು ಸ್ಥಗಿತಾವಸ್ಥೆಯಲ್ಲಿದ್ದು, ಸಂಘವನ್ನು ಸಮಾಪನೆಗೊಳಿಸಲು ಮತ್ತೊಮ್ಮೆ ಶಿಫಾರಸ್ಸು ಮಾಡಿರುವರು. ಸದರಿ ಸಂಘದ ಆರೋಪ ಪಟ್ಟಿಯನ್ನು ಈ ಕೆಳಗಿನಂತೆ ಸಲ್ಲಿಸಿರುವರು.

1. ಸಂಘವು ಪೋಟ ನಿಯಮ ನಂ.3ರ ಪ್ರಕಾರ ಮೂಲ ಉದ್ದೇಶಗಳಿಗೆ ತಕ್ಕಂತೆ ಕಾರ್ಯನಿರ್ವಹಿಸುತ್ತಿಲ್ಲ.
2. ಸಂಘದಲ್ಲಿ ಸದಸ್ಯರ ರಿಜಿಸ್ಟರ್ ಇರುವುದಿಲ್ಲ. ಸದಸ್ಯರಿಗೆ ಶೇರು ಸರ್ಟಿಫಿಕೇಟ್ ವಿತರಿಸಿರುವುದಿಲ್ಲ.
3. ಸಂಘದಲ್ಲಿ 1998-99 ರಿಂದ 2001-2002ನೇ ಸಾಲಿಗೆ ಆಡಳಿತ ಮಂಡಳಿ ಸಭೆಗಳನ್ನು ಜರುಗಿಸಿರುವುದಿಲ್ಲ.
4. ದಿನಾಂಕ: 1999 ರಿಂದ 2001ರ ಸಾಲಿನವರೆಗೆ ಸರ್ವ ಸಾಧಾರಣಾ ಸಭೆ ಜರುಗಿರುವುದಿಲ್ಲ.
5. ಸಂಘದಲ್ಲಿ ಸಿಬ್ಬಂದಿ ಗಾತ್ರ ವೇತನ ಶ್ರೇಣಿಗಳು ಮಂಜೂರಾಗಿದ್ದು ಇರುವುದಿಲ್ಲ. ಇದು ನಿಯಮ 17ರ ಉಲ್ಲಂಘನೆಯಾಗಿದೆ.
6. ಸಂಘದಲ್ಲಿ ಉದ್ರಿಕೊಡುವ ಅನುವು ಇಲ್ಲದಿದ್ದರೂ, ಉದ್ರಿ ಕೊಡಲಾಗಿದ್ದು ರೂ.0.44 ಲಕ್ಷ ಕಟ ಬಾಕಿ ಇರುತ್ತದೆ.
7. ಆಡಳಿತ ಮಂಡಳಿ ಚುನಾವಣೆ ಜರುಗಿಸಿದ್ದು, ಚುನಾವಣಾಧಿಕಾರಿಗಳಿಗೆ ಸಂಭಾವನೆ ಕೊಟ್ಟಿರುವುದಿಲ್ಲ.

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಉಲ್ಲೇಖ (7)ರನ್ವಯ ಆಡಳಿತ ಮಂಡಳಿಯ ಸದಸ್ಯರಿಗೆ ಸೂಚನಾ ಪತ್ರ ಜಾರಿ ಮಾಡಿ ಸಂಘವನ್ನು ಸಮಾಪನೆಗೊಳಿಸಲು ತಮ್ಮ ಆಕ್ಷೇಪಣೆ ಅಥವಾ ಹೇಳಿಕೆ ಏನಾದರೂ ಇದ್ದಲ್ಲಿ ತಿಳಿಸಲು ಸೂಚಿಸಲಾಗಿತ್ತು. ಆದರೆ ಇದುವರೆವಿಗೂ ಸದಸ್ಯರುಗಳಿಂದ ಆಕ್ಷೇಪಣೆಗಳು ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಉಲ್ಲೇಖ (8)ರ ಪತ್ರದಲ್ಲಿ ಉಪ ನಿಬಂಧಕರು, ಕಾರವಾರ ರವರು ತಿಳಿಸಿರುವಂತೆ ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರಂತೆ ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಗಿನ ಆದೇಶ ಹೊರಡಿಸಿದೆ.

### ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)ರ (ಬಿ)ರನ್ವಯ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ, ಕೆ.ಹೆಚ್.ಗೋಪಾಲಕೃಷ್ಣೇಗೌಡ, ಭಾ.ಆ.ಸೇ. ಸಹಕಾರ ಸಂಘಗಳ ನಿಬಂಧಕರು, ಕೇಂದ್ರ ಕಛೇರಿ, ಬೆಂಗಳೂರು, ಆದ ನಾನು ದಿ ವಾಟರ್ ಟ್ರಾನ್ಸ್ ಪೋರ್ಟ್ ಕೋ-ಆಫ್ ಸೊಸೈಟಿ ನಿ, ಕಾರವಾರ, ಇದನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕಾರವಾರ ಉಪವಿಭಾಗ, ಕಾರವಾರ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಆದೇಶ ಹೊರಡಿಸಿದ ದಿನಾಂಕದ ಒಂದು ವಾರದೊಳಗೆ ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಿಲ್ಲದೇ ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯಾಧರಿಸಿ ಆದ್ಯತಾ ಪಟ್ಟಿಯನ್ನು ತಯಾರಿಸಿ ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ-ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 25.01.2006ರಂದು ನೀಡಲಾಗಿದೆ.

**ಕೆ.ಹೆಚ್. ಗೋಪಾಲಕೃಷ್ಣೇಗೌಡ,**

ಪಿ.ಆರ್.177 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ:ಎಲ್.ಆರ್.ಎಫ್(ಎ)ಸಿಆರ್-02/ 05-06, ದಿನಾಂಕ:17ನೇ ಜನವರಿ, 2006**

**ವಿಷಯ :** ಮೆ: ಗ್ರೀನ್ ವುಡ್ ಎಜ್ಯುಕೇಷನ್ ಫೆಸಿಲಿಟಿ ಪ್ರೈ.ಲಿ., ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕ ವಡೇರಪುರ ಗ್ರಾಮದ ಸರ್ವೆ.ನಂ.10 ರಲ್ಲಿ 4-01 ಎ/ ಗುಂ ಹಾಗೂ ಸ.ನಂ. 16ರಲ್ಲಿ 4-05, ಸ.ನಂ.17/1 ರಲ್ಲಿ 0-28 ಗುಂಟೆ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಅನುಮತಿ ಕೋರಿರುವ ಬಗ್ಗೆ.

ಮೆ: ಗ್ರೀನ್ ವುಡ್ ಎಜ್ಯುಕೇಷನ್ ಫೆಸಿಲಿಟಿ ಪ್ರೈ.ಲಿ. ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸ.ನಂ.10 ರಲ್ಲಿ 4-01 ಎ/ ಗುಂ, ಸ.ನಂ.16ರಲ್ಲಿ 4-05, ಹಾಗೂ ಸ.ನಂ. 17/1 ರಲ್ಲಿ 0-28 ಎ/ ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ:ಎಲ್.ಆರ್.ಎಫ್: (109)/ ಸಿಆರ್(ಎ) 7/ 05-06 ದಿನಾಂಕ: 05.12.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 10ರಲ್ಲಿ 4-01 ಎ/ಗುಂ, ಸ.ನಂ. 16ರಲ್ಲಿ 4-05, ಹಾಗೂ ಸ.ನಂ.17/1 ರಲ್ಲಿ 0-28 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಕಂಪನಿಗಳ ನೊಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಇಲ್ಲಿ ದಿನಾಂಕ: 02.11.2004ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚಿಕ್ಕವಡೇರಪುರ ಗ್ರಾಮದ ಸ.ನಂ.10ರಲ್ಲಿ 4-01 ಎ/ಗುಂ, ಸ.ನಂ.16ರಲ್ಲಿ 4-05, ಹಾಗೂ ಸ.ನಂ.17/1 ರಲ್ಲಿ 0-28 ಎ/ಗುಂ ಜಮೀನನ್ನು ಮೆ: ಗ್ರೀನ್ ವುಡ್ ಎಜ್ಯುಕೇಷನ್ ಫೆಸಿಲಿಟಿ ಪ್ರೈ.ಲಿ. ನಂ.377, 3ನೇ ಬ್ಲಾಕ್, ಕೋರಮಂಗಲ, ಸರ್ಜಾಪುರ ರಸ್ತೆ, ಬೆಂಗಳೂರು-34 ರವರೆಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1)(11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಅರ್ಜಿತ ಸಂಸ್ಥೆ ನೊಂದಣಿ ಆಗದ ಹೊರತು ಜಮೀನು ಹೊಂದಲು ಅರ್ಹವಾಗಿರುವುದಿಲ್ಲ.
2. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
3. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇ.55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
4. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ. ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
8. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
9. ಸದರಿ ಸಂಸ್ಥೆಯು ಪ್ರಸ್ತಾಪಿತ ಉದ್ದೇಶಕ್ಕಾಗಿ ಜಮೀನನ್ನು ಉಪಯೋಗಿಸಲು ಸಂಬಂಧಪಟ್ಟ ಪ್ರಾಧಿಕಾರದಿಂದ ಅನುಮತಿ ಪತ್ರ ಪಡೆದು 3 ತಿಂಗಳೊಳಗಾಗಿ ಈ ಕಛೇರಿಗೆ ಹಾಜರುಪಡಿಸತಕ್ಕದ್ದು. ತಪ್ಪಿದ್ದಲ್ಲಿ ಈ ಆದೇಶವು ತಂತಾನೆ ರದ್ದುಗೊಳ್ಳುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ.

ಪಿ.ಆರ್.179

**ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ರವರ ನಡವಳಿಗಳು**

**ಕ್ರಮಾಂಕ: ಡಿಆರ್‌ಬಿ/ ಸಮಾಪನೆ/ 53/ 2005-06, ದಿನಾಂಕ:21ನೇ ಜನವರಿ, 2006**

**ವಿಷಯ :** ಸಮಾಪನೆಯಲ್ಲಿರುವ ಉದಯ ಕನ್ಸೂಮರ್ಸ್ ಕೋ-ಆಪರೇಟಿವ್ ಸೊಸೈಟಿ (ಲಿ) ನಂ.18/19, 2ನೇ ಅಡ್ಡರಸ್ತೆ, 16ನೇ ಮುಖ್ಯರಸ್ತೆ, 4ನೇ ವಿಭಾಗ, ನಂದಿನಿ ಬಡಾವಣೆ, ಬೆಂಗಳೂರು-96 ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ: 19.11.2005ರ ನೋಟೀಸು.
2. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ: 08.12.2005ರ ಆದೇಶ.
3. ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಮಾಪನಾಧಿಕಾರಿ, ಉದಯ ಕನ್ಸೂಮರ್ಸ್ ಕೋ-ಆಪರೇಟಿವ್ ಸೊಸೈಟಿ (ಲಿ) ಬೆಂಗಳೂರು ಇವರ ಪತ್ರದ ದಿನಾಂಕ: 20.01.2006.

**ಪ್ರಸ್ತಾವನೆ:**

ಉದಯ ಕನ್ಸೂಮರ್ಸ್ ಕೋ-ಆಪರೇಟಿವ್ ಸೊಸೈಟಿ (ಲಿ) ನಂ.18/19, 2ನೇ ಅಡ್ಡರಸ್ತೆ, 16ನೇ ಮುಖ್ಯರಸ್ತೆ, 4ನೇ ವಿಭಾಗ, ನಂದಿನಿ ಬಡಾವಣೆ, ಬೆಂಗಳೂರು-96 ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿ ಈ ಕಛೇರಿಯ ಗಮನಕ್ಕೆ ತರಲಾಗಿದ್ದು, ಈ ಹಿನ್ನೆಲೆಯಲ್ಲಿ ಸದರಿ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಮನಗಂಡು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಅವರ ದಿನಾಂಕ: 22.12.2004ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಂಘದ ಹೆಸರನ್ನು ದಿನಾಂಕ: 02.03.2005ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸಂಘದ ಸದಸ್ಯರಾಗಲೀ ಆಡಳಿತ ಮಂಡಳಿಯ ಸದಸ್ಯರಾಗಲೀ ಅಥವಾ ಸಾರ್ವಜನಿಕರಾಗಲೀ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆಗಳಿದ್ದಲ್ಲಿ, ಈ ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳ ಒಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ಸೂಚನೆ ನೀಡಲಾಗಿತ್ತು. ತದನಂತರ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ (1)ರಲ್ಲಿ ಕಾಣಿಸಿರುವ ದಿನಾಂಕ: 19.11.2005ರ ನೋಟೀಸಿನಲ್ಲಿ ಸದರೀ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸಿ ಸಂಘದ ನೊಂದಣಿಯನ್ನು ಏಕೆ ರದ್ದುಪಡಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರೀ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ಆದರೆ ಸದರೀ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿರುವುದರಿಂದ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರ ರೀತ್ಯಾ ಹೊರಡಿಸಿರುವ ಉಲ್ಲೇಖ (2)ರಲ್ಲಿ ಕಾಣಿಸಿರುವ ದಿನಾಂಕ: 08.12.2005ರ ಆದೇಶದನ್ವಯ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿದ್ದು, ಸದರೀ ಕಾಯ್ದೆಯ ಕಲಂ 73ರನ್ವಯ ಸಹಕಾರಿ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಲಾಗಿತ್ತು.

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಉಲ್ಲೇಖ (3)ರಲ್ಲಿ ಕಾಣಿಸಿರುವ ಅವರ ದಿನಾಂಕ: 20.01.2006ರ ಪತ್ರದಲ್ಲಿ ತಾನು ದಿನಾಂಕ: 13.01.2006ರಂದು ಮೇಲ್ಕಂಡ ಸಹಕಾರ ಸಂಘದ ಸಮಾಪನಾಧಿಕಾರಿಯ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಅವರು ಮುಂದುವರಿದು, ಸಂಘದಲ್ಲಿರುವ ಲೆಕ್ಕ ಪುಸ್ತಕಗಳನ್ನು ಪರಿಶೀಲಿಸಲಾಗಿ ಸಂಘದ ಲೆಕ್ಕ-ಪುಸ್ತಕಗಳು 2003-2004ನೇ ಸಾಲಿನವರೆಗೆ ಲೆಕ್ಕಪರಿಶೋಧನೆಯಾಗಿದ್ದು, ತದನಂತರ ಸಂಘದ ಲೆಕ್ಕಪುಸ್ತಕಗಳನ್ನು ಸಂಘದಲ್ಲಿ ನಿರ್ವಹಿಸಿದ್ದು, ಸಂಘವು ಪ್ರತಿವರ್ಷ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ನಡೆಸಿರುವುದಾಗಿ ತಿಳಿಸಿರುತ್ತಾರೆ. ಸಂಘದ ಹಿಂದಿನ ಆಡಳಿತ ಮಂಡಳಿಯು ಆಗಿಂದಾಗ್ಗೆ ಆಡಳಿತ ಮಂಡಳಿ ಸಭೆಯನ್ನು ನಡೆಸಿದ್ದು, ತಹಲ್‌ವರೆವಿಗೂ ಸಭೆಯ ನಡವಳಿಗಳನ್ನು ದಾಖಲಿಸಿರುವುದಾಗಿ ಅವರು ತಿಳಿಸಿರುತ್ತಾರೆ. ಈ ಸಹಕಾರ ಸಂಘವು ಹಾಲಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಿಂದ ಪಡಿತರ ವ್ಯಾಪಾರ ವಹಿವಾಟಿನ ಬಗ್ಗೆ ಪರವಾನಗಿ ಸಂಖ್ಯೆ: 335/95 ಹಾಗೂ 462/ 04-05ರ ರೀತ್ಯಾ, ಪರವಾನಗಿ ಪಡೆದು ನಿರ್ವಹಿಸಿಕೊಂಡು ಬಂದಿದ್ದು, ಕಾರ್ಯಚಟುವಟಿಕೆ ನಡೆಸುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಗೊಳಿಸಿ ಸಂಘವನ್ನು ಕೆಲವು ಷರತ್ತಿಗೆ ಒಳಪಟ್ಟು ಪುನಃಶ್ಚೇತನಗೊಳಿಸುವಂತೆ ಹಾಗೂ ಸಂಘವನ್ನು ಕಾರ್ಯನಿರತ ಸಹಕಾರ ಸಂಘಗಳ ಪಟ್ಟಿಗೆ ಸೇರಿಸುವಂತೆ ಅವರು ಕೋರಿರುತ್ತಾರೆ. ಸಂಘದ ಹಾಲಿ ಇರುವ ಆಡಳಿತ ಮಂಡಳಿಯು 2004-05 ರಿಂದ 2008-09ರ 5 ವರ್ಷಗಳ ಅವಧಿಗೆ ದಿನಾಂಕ: 04.06.04ರಂದು ಆಯ್ಕೆಯಾಗಿದ್ದು, ಈ ಹಿನ್ನೆಲೆಯಲ್ಲಿ ಸದರೀ ಆಡಳಿತ ಮಂಡಳಿಯನ್ನೇ ಮುಂದುವರಿಸುವಂತೆ ಅವರು ಕೋರಿರುತ್ತಾರೆ.

ಸಂಘದ ಸಮಾಪನಾಧಿಕಾರಿಯವರ ಪ್ರಸ್ತಾವವನ್ನು ಪರಿಶೀಲಿಸಿದೆ. ಅವರು ಒದಗಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಮೇಲ್ಕಂಡ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಿರುವುದು ಕಂಡುಬಂದಿದ್ದು, ಈ ಹಿನ್ನೆಲೆಯಲ್ಲಿ ಕೆಲವು ಷರತ್ತುಗಳಿಗೆ ಒಳಪಟ್ಟು ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಪಡಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ/ 69/ ಸಿಎಲ್‌ಎಂ/ 2001 ದಿನಾಂಕ: 21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಆದ ನಾನು ಉದಯ ಕನ್ಸೂಮರ್ಸ್ ಕೋ-ಆಪರೇಟಿವ್ ಸೊಸೈಟಿ (ಲಿ) ನಂ.18/19, 2ನೇ ಅಡ್ಡರಸ್ತೆ, 16ನೇ ಮುಖ್ಯರಸ್ತೆ, 4ನೇ ವಿಭಾಗ, ನಂದಿನಿ ಬಡಾವಣೆ, ಬೆಂಗಳೂರು-96 ಈ ಸಹಕಾರ ಸಂಘವನ್ನು ಕಲಂ 72(2)ರನ್ವಯ ಹೊರಡಿಸಿರುವ ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ:08.12.2005ರ ಆದೇಶದ ರೀತ್ಯಾ ಸಮಾಪನೆಗೊಳಿಸಿರುವುದನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಆದೇಶಿಸಿರುತ್ತೇನೆ ಹಾಗೂ ಸದರೀ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಸಂಘದ ಈ ಹಿಂದಿನ ಆಡಳಿತ ಮಂಡಳಿಯು 2004-05 ರಿಂದ 2008-09ನೇ ಸಾಲುಗಳ ಅವಧಿಗೆ ಆಯ್ಕೆಯಾಗಿರುವುದರಿಂದ, ಈ ಆಡಳಿತ ಮಂಡಳಿ ಹಾಗೂ ಪದಾಧಿಕಾರಿಗಳು ಅವರ ಅವಧಿ ಮುಗಿಯುವವರೆಗೆ ಮುಂದುವರಿಯತಕ್ಕದ್ದು ಎಂದೂ ಈ ಮೂಲಕ ಆದೇಶಿಸಲಾಗಿದೆ.

**ಷರತ್ತುಗಳು**

1. ಸಂಘದ ದುಡಿಯುವ ಬಂಡವಾಳವನ್ನು ಷೇರು ಧನ ಸಂಗ್ರಹಿಸುವುದರ ಮೂಲಕ ಹೆಚ್ಚಿಸಿಕೊಳ್ಳುವುದು.
2. ಸಂಘದ ಸದಸ್ಯರುಗಳ ಹಿತಕ್ಕಾಗಿ ವಿಶೇಷವಾದ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡು ಸಂಘವನ್ನು ಆರ್ಥಿಕವಾಗಿ ಸದೃಢಗೊಳಿಸುವುದು.
3. ಸಂಘದ ಉಪ ನಿಯಮಗಳಲ್ಲಿರುವ ಉದ್ದೇಶಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.
4. ಕರ್ನಾಟಕ ಸಹಕಾರ ಸಂಘಗಳ ನಿಯಮ 17ರಂತೆ ಸಂಘದ ಸಿಬ್ಬಂದಿಯ ವೃಂದಬಲ ಮತ್ತು ವೇತನ ಶ್ರೇಣಿಗಳನ್ನು ಇಲಾಖೆಯಿಂದ ಅನುಮೋದನೆ ಪಡೆಯುವುದು.
5. 2002-03 ರಿಂದ 2004-05ನೇ ಸಾಲುಗಳವರೆಗೆ ಲೆಕ್ಕ-ಪುಸ್ತಕಗಳನ್ನು ಆಡಿಟ್ ಮಾಡುವಂತೆ ಆಡಿಟ್ ಇಲಾಖೆಯಲ್ಲಿ ಮನವಿ ಮಾಡುವುದು.
6. ಸಂಘವು ಸಹಕಾರ ಸಂಘಗಳ ಕಾಯ್ದೆಯ ಕಲಂ 29 ಜಿ(6)ಯ ರೀತ್ಯಾ ನಿಗದಿಪಡಿಸಿರುವ ಮಾಹಿತಿಗಳನ್ನು ತಪ್ಪದೇ ಈ ಕಛೇರಿಗೆ ಸಲ್ಲಿಸತಕ್ಕದ್ದು.
7. ಸಂಘವು ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿಗಳ ಅವಕಾಶಗಳ ರೀತ್ಯಾ ನಿಗದಿತ ಅವಧಿಯ ಒಳಗೆ ಸಂಘದ ಸರ್ವಸದಸ್ಯರ ಸಭೆ ಹಾಗೂ ಆಡಳಿತ ಮಂಡಳಿ ಸಭೆ ಮತ್ತು ಪದಾಧಿಕಾರಿಗಳ ಚುನಾವಣೆಯನ್ನು ನಡೆಸತಕ್ಕದ್ದು.
8. ಸಂಘದ ನೊಂದಾಯಿತ ಮೂಲ ಉಪನಿಯಮಗಳನ್ನು ಪತ್ತೆ ಹಚ್ಚಿ ನಿರ್ವಹಿಸಲು ಕೂಡಲೇ ಸೂಕ್ತ ಕ್ರಮಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:21.01.2006ರಂದು ನೀಡಿರುತ್ತೇನೆ.

**ಬಿ.ಸಿ. ಸತೀಶ್**

ಪಿ.ಆರ್.180 ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರುನಗರ ಜಿಲ್ಲೆ.

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಕೋಲಾರ ಜಿಲ್ಲೆ, ಕೋಲಾರ

## ಪ್ರಕಟಣೆ

### ಸಂಖ್ಯೆ:ಬಿಸಕಅ:ಯೋಜನೆ: ಸಿಆರ್: 2005-06, ದಿನಾಂಕ:21ನೇ ಜನವರಿ, 2006

**ವಿಷಯ :** 2005-06ನೇ ಸಾಲಿಗೆ ಪ.ಜಾತಿ ಮತ್ತು ಪ.ವರ್ಗದ ಕಾನೂನು ಪದವೀಧರರಿಗೆ ವಕೀಲ ತರಬೇತಿಗಾಗಿ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ :** ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68: ಎನ್‌ಡಬ್ಲ್ಯೂ: 89 ದಿನಾಂಕ: 02.11.1990.

2005-06ನೇ ಸಾಲಿಗೆ ಪ.ಜಾತಿ ಮತ್ತು ಪ.ವರ್ಗದ ಕಾನೂನು ಪದವೀಧರರಿಗೆ ವಕೀಲ ತರಬೇತಿಗಾಗಿ ಪ.ಜಾತಿ ಮತ್ತು ಪ.ವರ್ಗದ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು**

1. ಎಲ್.ಎಲ್.ಬಿ. ಪರೀಕ್ಷೆಯಲ್ಲಿ ಪಾಸು ಮಾಡಿದ ಪ.ಜಾತಿ ಮತ್ತು ಪ.ವರ್ಗದ ಅಭ್ಯರ್ಥಿಗಳು ಪ್ರಯೋಜನೆ ಪಡೆಯಲು ಅರ್ಹರಾಗಿರುತ್ತಾರೆ. ಕಾನೂನು ಪದವೀಯಲ್ಲಿ ಉತ್ತೀರ್ಣರಾಗಿ ಎರಡು ವರ್ಷಗಳು ಮೀರಿರಬಾರದು.
2. ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಗಳ ಪ್ರಕಾರ ಜಿಲ್ಲಾ ಆಯ್ಕೆ ಸಮಿತಿಯ ಸಂದರ್ಶನಕ್ಕೆ ಕರೆದು ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.
3. ತರಬೇತಿಯ ಅವಧಿ ನಾಲ್ಕು ವರ್ಷವಿದ್ದು, ತರಬೇತಿ ಅವಧಿಯಲ್ಲಿ ರೂ.1,000-00 ಗಳ ಮಾಸಿಕ ಶಿಷ್ಯವೇತನ ನೀಡಲಾಗುವುದು.
4. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಹೆಚ್ಚು ವೃತ್ತಿಯಲ್ಲಿ ಅನುಭವ ಇದ್ದವರ ಹತ್ತಿರ ತರಬೇತಿಗಾಗಿ ನಿಯೋಜಿಸಲಾಗುವುದು.
5. ಅಭ್ಯರ್ಥಿಗಳ ವಯೋಮಿತಿ 35 ವರ್ಷಕ್ಕೆ ಮೀರಿರಬಾರದು. (ಅರ್ಜಿ ಸಲ್ಲಿಸಿದ ಕಡೆಯ ದಿನಾಂಕದೊಳಗೆ ಇರಬೇಕು).
6. ತರಬೇತಿ ಸೌಲಭ್ಯವನ್ನು ಪಡೆಯಲು ಇಚ್ಛಿಸುವ ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರುಗಳನ್ನು ನೊಂದಾಯಿಸಿರಬೇಕು. ಒಂದು ವೇಳೆ ಅವರುಗಳು ತಮ್ಮ ಹೆಸರುಗಳನ್ನು ನೊಂದಾಯಿಸಿದ್ದರೆ, ತರಬೇತಿ ಭತ್ಯೆಯನ್ನು ನೊಂದಣಿ ಮಾಡಿಸಿದ ನಂತರ ಪಾವತಿ ಮಾಡಲಾಗುವುದು.
7. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಯು ತರಬೇತಿ ಮುಗಿಯುವವರೆವಿಗೂ ಅಂದರೆ ನಾಲ್ಕು ವರ್ಷದವರೆವಿಗೂ ತರಬೇತಿಯನ್ನು ಬಿಡುವುದಿಲ್ಲವೆಂದು ಕರಾರು ಪತ್ರ ಬರೆದು ಕೊಡಬೇಕಾಗುವುದು. ಒಂದು ವೇಳೆ ಬಿಟ್ಟಲ್ಲಿ ಅಲ್ಲಿಯವರೆಗೆ ಪಡೆದ ಶಿಷ್ಯ ವೇತನವನ್ನು ಸರ್ಕಾರಕ್ಕೆ ವಾಪಸ್ಸು ಮಾಡಬೇಕಾಗುತ್ತದೆ. ಈ ಹಣವನ್ನು ಶೇ.10ರಷ್ಟು ಬಡ್ಡಿ ಸೇರಿಸಿ ಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು. ಒಂದು ವೇಳೆ ರಾಜ್ಯ: ಕೇಂದ್ರ ಸರ್ಕಾರಿ ಕೆಲಸ ಸಿಕ್ಕಲ್ಲಿ ಮಾತ್ರ ನಿಯಮ ಸಡಿಲಗೊಳಿಸಲಾಗುವುದು.
8. ಅಪೂರ್ಣವಾದ ಮತ್ತು ನಿಬಂದನೆಗಳಿಗೆ ಒಳಪಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
9. ಅಭ್ಯರ್ಥಿಗಳು ಸುಳ್ಳು ಪ್ರಮಾಣ ಪತ್ರಗಳನ್ನು ಮತ್ತು ಮಾಹಿತಿಯನ್ನು ನೀಡಿದಲ್ಲಿ ಅಂತಹ ಅಭ್ಯರ್ಥಿಗಳನ್ನು ಕಾನೂನಿನ ಕ್ರಮಕ್ಕೆ ಒಳಪಡಿಸಲಾಗುವುದು.

ಮೇಲ್ಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸಬಹುದಾಗಿದೆ. ಅರ್ಜಿ ನಮೂನೆಗಳನ್ನು ಕಛೇರಿ ವೇಳೆಯಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ ಕೋಲಾರ ರವರಿಂದ ಈ ಪ್ರಕಟಣೆಯ ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಒಂದು ತಿಂಗಳವರೆಗೆ ಪಡೆಯಬಹುದು. ಪೂರ್ಣ ವಿವರಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಈ ಪ್ರಕಟಣೆಯ ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡ ದಿನಾಂಕದಿಂದ ಒಂದು ತಿಂಗಳವರೆಗೆ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ನೀಡಬಹುದಾಗಿರುತ್ತದೆ. ನಿಗದಿತ ದಿನಾಂಕ: ಮೀರಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಗಳನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಕೋಲಾರ ರವರಿಗೆ ಕಳುಹಿಸಿಕೊಡುವುದು. ಹೆಚ್ಚಿನ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

ಸದಸ್ಯ ಕಾರ್ಯದರ್ಶಿಗಳು

ಪಿ.ಆರ್.181 ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಕೋಲಾರ.

**GOVERNMENT OF KARNATAKA,**
**DIRECTORATE OF ECONOMICS AND STATISTICS, BANGALORE-1.**
**Consumer Price Index Numbers For Industrial Workers**

No. DES 23 PWX 2005 Month: November, 2005

State: Karnataka Base: 1987-88=100 Date : 23-01-2006

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Mysore | Rai chur | Tum kur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:**<br>(a) Cereals & Products | 342 | 398 | 376 | 336 | 355 | 352 | 348 | 361 | 292 | 377 | 331 | 375 |
| | (b) Pulses & Products | 325 | 365 | 337 | 373 | 298 | 330 | 358 | 346 | 365 | 349 | 302 | 324 |
| | (c) Oil & Fats | 250 | 245 | 253 | 250 | 263 | 256 | 263 | 260 | 230 | 265 | 259 | 258 |
| | (d) Meat, Fish & Eggs | 349 | 356 | 380 | 447 | 410 | 346 | 336 | 375 | 533 | 409 | 400 | 348 |
| | (e) Milk & Products | 334 | 263 | 322 | 323 | 306 | 267 | 251 | 342 | 289 | 257 | 307 | 281 |
| | (f) Condiments & Spices | 257 | 351 | 378 | 412 | 340 | 268 | 308 | 307 | 280 | 340 | 275 | 330 |
| | (g) Vegetables & Fruits | 350 | 399 | 388 | 405 | 339 | 293 | 405 | 521 | 365 | 444 | 294 | 516 |
| | (h) Other Food | 294 | 383 | 366 | 370 | 310 | 324 | 335 | 310 | 286 | 312 | 331 | 348 |
| | **FOOD GROUP INDEX** | **321** | **360** | **359** | **358** | **331** | **313** | **329** | **355** | **333** | **342** | **319** | **352** |
| II. | Pan, Supari, Tobacco & Intoxicants | 311 | 345 | 351 | 335 | 386 | 447 | 349 | 475 | 295 | 323 | 359 | 374 |
| III. | Fuel & Light | 318 | 321 | 310 | 457 | 293 | 325 | 354 | 333 | 272 | 310 | 481 | 289 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 227 | 373 | 277 | 266 | 347 | 382 | 242 | 293 | 431 | 214 |
| VI. | **MISCELLANEOUS:**<br>(a) Medical Care | 585 | 511 | 372 | 291 | 288 | 268 | 348 | 324 | 361 | 313 | 394 | 216 |
| | (b) Education, Recreation & Amusement | 351 | 341 | 516 | 219 | 391 | 483 | 345 | 293 | 364 | 462 | 377 | 326 |
| | (c) Transport & Communication | 414 | 415 | 332 | 526 | 595 | 409 | 365 | 561 | 458 | 579 | 388 | 440 |
| | (d) Personal Care & effects | 259 | 279 | 258 | 278 | 337 | 259 | 311 | 290 | 267 | 317 | 269 | 273 |
| | (e) Others | 334 | 364 | 282 | 428 | 302 | 273 | 253 | 286 | 236 | 330 | 426 | 243 |
| | Miscellaneous Group | 372 | 352 | 334 | 328 | 357 | 325 | 320 | 306 | 325 | 401 | 364 | 285 |
| | **GENERAL INDEX** | **298** | **316** | **308** | **337** | **300** | **288** | **305** | **323** | **296** | **309** | **326** | **280** |
| | To convert to Base 1960 Multiply by Linking Factor. | **7.39** | **9.19** | **8.27** | **…** | **8.26** | **8.56** | **9.25** | **7.92** | **9.31** | **9.05** | **…** | **…** |

for Director.

**Government of India,**
**Ministry of Labour (Labour Bureau)**
**No. 112/1(KTK)/2001-FLS**

'Cleremount' Shimla-171 004

**CONSUMER PRICE INDEX NUMBERS FOR INDUSTRIAL WORKERS (BASE-1982=100)**

State: Karnataka Month: November, 2005

| Code | Group/Sub-group/ Centre | Bangalore | Belgaum | Hubli Dharwar | Mercara |
|---|---|---|---|---|---|
| | 1 | 2 | 3 | 4 | 5 |
| 1000 | **I A:FOOD:** | | | | |
| 1100 | (a) Cereals & Products | 440 | 537 | 461 | 456 |
| 1200 | (b) Pulses & Products | 621 | 568 | 579 | 606 |
| 1300 | (c) Oils & Fats | 405 | 364 | 382 | 428 |
| 1400 | (d) Meat, Fish & Eggs | 652 | 648 | 639 | 615 |
| 1500 | (e) Milk & Products | 379 | 530 | 442 | 461 |
| 1600 | (f) Condiments & Spices | 588 | 628 | 636 | 545 |
| 1700 | (g) Vegetables & Fruits | 684 | 564 | 725 | 555 |
| 1800 | (h) Other Food | 798 | 827 | 735 | 760 |
| 1000 | **I-A FOOD GROUP** | 561 | 595 | 554 | 548 |
| 2000 | I-Pan, Supari, Tobacco & Intoxicants | 659 | 600 | 592 | 534 |
| 3000 | II-Fuel & Light | 872 | 707 | 623 | 431 |
| 4000 | III-Housing Index | 630 | 797 | 651 | 200 |
| 5000 | IV-Clothing, Bedding & Footwear | 293 | 293 | 330 | 437 |
| 6000 | **V-Miscellaneous:** | | | | |
| 6100 | (a) Medical Care | 437 | 552 | 469 | 343 |
| 6200 | (b) Education, Recreation & Amusement | 503 | 851 | 623 | 641 |
| 6300 | (c) Transport & Communication | 810 | 520 | 780 | 699 |
| 6400 | (d) Personal Care & effects | 488 | 484 | 508 | 471 |
| 6500 | (e) Others | 524 | 595 | 476 | 482 |
| 6600 | Miscellaneous Group | 552 | 562 | 542 | 515 |
| | **GENERAL INDEX** | **553** | **605** | **561** | **505** |

**RAJESH THAKUR**
Joint Director.

PR-182

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅದಾ: ಕಾನಪ:ಸಿಆರ್-3/ 06, ದಿನಾಂಕ:7ನೇ ಜನವರಿ, 2006**

**ಅರ್ಜಿದಾರರು**

1. ಶೇಖರಗೌಡ ಬಿನ್ ರೇವಣಸಿದ್ದಪ್ಪ,
   ಮತ್ತಿತರ 4 ಜನರು.
   ಎಲ್ಲರ ವಾಸ: ಕೆ. ಬೇವಿನಹಳ್ಳಿ ಗ್ರಾಮ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು**

1. ಎಂ. ಶಿವನಾಗಪ್ಪ ಬಿನ್ ತಿರುಕಪ್ಪ, ಟ್ರ್ಯಾಕ್ಟರ್ ಮಾಲೀಕರು,
   ನಂ.ಕೆಎ 17/ ಟಿ 2878,
   ವಾಸ: ಹೊಳೆಸಿರಿಗೆರೆ ಗ್ರಾಮ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ.
2. ದಿ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
   ಪ್ರವಾಸಿ ಮಂದಿರ ರಸ್ತೆ, ದಾವಣಗೆರೆ.

**ಪ್ರಕಟಣೆ**

ಶ್ರೀ ಶೇಖರಗೌಡ (ಗಂಡ), ಸಿದ್ದೇಶಿ, ಮಾಹೇಶಿ, ರಾಜು (ಮಕ್ಕಳು) ಇವರುಗಳಾದ ತಾವು ಮೃತ ಮಂಜುಳಮ್ಮ ಇವರ ಗಂಡ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಂಜುಳಮ್ಮ ರವರು ಒಂದನೇ ಪ್ರತಿವಾದಿಗಳಾದ ಎಂ. ಶಿವಲಿಂಗಪ್ಪ ಇವರ ಟ್ರ್ಯಾಕ್ಟರ್ ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.184

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂಖ್ಯೆ:ಕಾಅದಾ: ಕಾನಪ:ಸಿಆರ್-13/ 2006, ದಿನಾಂಕ:17ನೇ ಜನವರಿ, 2006**

**ಅರ್ಜಿದಾರರು**

1. ಶ್ರೀಮತಿ ಪಾರ್ವತಮ್ಮ ಕೋಂ ಲೇಟ್ ಹೊನ್ನಪ್ಪ, 35 ವರ್ಷಗಳು.
2. ಕುಮಾರ್ ಹೆಚ್. ಬಿನ್ ಲೆಟ್ ಹೊನ್ನಪ್ಪ. 22 ವರ್ಷಗಳು.
3. ಕು: ಹೊನ್ನಮ್ಮ ಬಿನ್ ಲೇಟ್ ಹೊನ್ನಪ್ಪ, 20 ವರ್ಷಗಳು.
4. ವೆಂಕಟೇಶ್ ಹೆಚ್. ಬಿನ್ ಲೇಟ್ ಹೊನ್ನಪ್ಪ, 19 ವರ್ಷಗಳು.

**ಎಲ್ಲರ ವಿಳಾಸ:** ಹಳೇ ಭರಮಾಪುರ, ಹರಿಹರ ಟೌನ್, ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು**

1. ಜಯಮೇರಿ ಕೋಂ ಪುಷ್ಪರಾಜನ್, 2ನೇ ಕ್ರಾಸ್, ಚನ್ನಕೇಶವ ನಗರ, ಶಿಕಾರಿಪುರ ಟೌನ್, ಶಿವಮೊಗ್ಗ ಜಿಲ್ಲೆ.
2. ದಿ ಮೇನೇಜರ್, ದಿ ಯುನೈಟೆಡ್ ಇನ್ಸೂರೆನ್ಸ್ ಕಂ.ಲಿ., ಪಿ.ಬಿ. ನಂ.21, ಗೋವಿಂದ ಕೃಪ, ಟ್ರಸ್ಟ್ ಬಿಲ್ಡಿಂಗ್, 2ನೇ ಹಂತ, ಜೆ.ಸಿ. ರೋಡ್, ಸಾಗರ.

**ಪ್ರಕಟಣೆ**

ಶ್ರೀಮತಿ ಪಾರ್ವತಮ್ಮ ಕೋಂ ಲೇಟ್ ಹೊನ್ನಪ್ಪ, ಕುಮಾರ್, ಕು: ಹೊನ್ನಮ್ಮ ಮತ್ತು ವೆಂಕಟೇಶ್ ಬಿನ್ ಲೇಟ್ ಹೊನ್ನಪ್ಪ ಇವರುಗಳಾದ ತಾವು ಮೃತ ಹೊನ್ನಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹೊನ್ನಪ್ಪ ರವರು ಒಂದನೇ ಪ್ರತಿವಾದಿಗಳಾದ ಜಯಮೇರಿ ಕೋಂ ಪುಷ್ಪರಾಜನ್ ಇವರ ಟ್ರಾಕ್ಟರ್ ಟ್ರೈಲರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.185

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಬೆಂಗಳೂರು

### 94ನೇ ನಿಯಮದ 67ನೇ ಪ್ರಕರಣದ ಮೇರೆಗಿನ ಘೋಷಣೆ

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಹದ್ದು ಗಿಡದ ಹಳ್ಳ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ, ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 67ನೇ ಪ್ರಕರಣದ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಹದ್ದು ಗಿಡದ ಹಳ್ಳ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಹದ್ದು ಗಿಡದ ಹಳ್ಳ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸಿದೆ.

2. ಸಾರ್ವಜನಿಕ ಹೆದ್ದಾರಿಯ ಹಕ್ಕಿನ ಜೊತೆಗೆ ಸದರಿ ಹದ್ದು ಗಿಡದ ಹಳ್ಳ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುವುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ 90 ದಿನಗಳ ಒಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಹಾಗೂ ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂದಿಸಿರುವಂತೆ ಡೆಪ್ಯೂಟಿ ಕಮೀಷನರ್‌ರವರು ಪರಿಶೀಲಿಸತಕ್ಕದ್ದು.

**ಅಧಿಸೂಚನೆ**

| | |
|---|---|
| ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮಗಳು | ರಾಮಗೊಂಡನಹಳ್ಳಿ ಸರ್ವೆ ನಂ.9,10,12 ಗಡಿ ಭಾಗ |
| ತಾಲ್ಲೂಕುಗಳು | ಬೆಂಗಳೂರು ಪೂರ್ವ ತಾಲ್ಲೂಕು |
| ಜಿಲ್ಲೆ | ಬೆಂಗಳೂರು |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸರ್ವೆ ನಂ.9, 10 ಹಾಗೂ 12ರ ಜಮೀನಿಗೆ ಹೊಂದಿಕೊಂಡಿರುತ್ತದೆ. |
| ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | ಹದ್ದುಗಿಡದ ಹಳ್ಳ ಸರ್ವೆ ನಂ.10 ಹಾಗೂ 12ರಲ್ಲಿ $10^1/_2$ ಗುಂಟೆ ಜಮೀನು |
| ಮೇರೆ | ಉತ್ತರ : ನಾರಾಯಣಪುರ ಗಡಿ<br>ದಕ್ಷಿಣ : ಸರ್ವೆ ನಂ.10ರ ಜಮೀನು<br>ಪೂರ್ವ : ಸರ್ವೆ ನಂ.12ರ ಜಮೀನು |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ ದಾರಿ ಅಥವಾ ಅದರ ಭಾಗ | ನಾರಾಯಣಪುರದ ಗಡಿ |

ತಹಶೀಲ್ದಾರರು,
ಬೆಂಗಳೂರು ಪೂರ್ವ ತಾಲ್ಲೂಕು.

ಪಿ.ಆರ್.511

## ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಗಳವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

### ಅಧಿಸೂಚನೆ

### ನಂ. ಎಂಎಜಿ (1) ಸಿಆರ್/469/ 05-06, ದಿನಾಂಕ:28ನೇ ಜನವರಿ, 2006

**ವಿಷಯ :** ತುಮಕೂರು ನಗರದ ಎರಡು ಸ್ಥಳಗಳಲ್ಲಿ ಸಂಚಾರಿ ವ್ಯವಸ್ಥೆಯನ್ನು ಸುಗಮಗೊಳಿಸಲು ಏಕಮುಖ ಸಂಚಾರಿ ವ್ಯವಸ್ಥೆಯನ್ನು ಜಾರಿಗೊಳಿಸುವ ಕುರಿತು.

**ಉಲ್ಲೇಖ :** ಜಿಲ್ಲಾ ಆರಕ್ಷಕ ಅಧೀಕ್ಷಕರು, ತುಮಕೂರು ಇವರ ಪತ್ರ ನಂ.ಸಿಬಿ124/05 ದಿನಾಂಕ: 24.12.2005.

1. ಜಿಲ್ಲಾ ಆರಕ್ಷಕ ಅಧೀಕ್ಷಕರು ತುಮಕೂರು ಇವರು ಉಲ್ಲೇಖಿತ ಪತ್ರದಲ್ಲಿ

(i) ತುಮಕೂರು ನಗರದಲ್ಲಿ ಈಗಾಗಲೇ ಸಂಚಾರಿ ಒತ್ತಡ ಹೆಚ್ಚಾಗಿದ್ದು, ಪ್ರತಿ ದಿನವು ಸೈಕಲ್‌ಗಳು, ದ್ವಿಚಕ್ರ ವಾಹನಗಳು, ತ್ರಿಚಕ್ರ ವಾಹನಗಳು, ನಾಲ್ಕು ಚಕ್ರ ವಾಹನಗಳು, ಭಾರಿ ವಾಹನಗಳು, ಬಸ್ಸುಗಳು ಸುಮಾರು 25000 ಹೆಚ್ಚಿನ ಸಂಖ್ಯೆಯಲ್ಲಿ ಸಂಚರಿಸುತ್ತವೆ ಎಂತಲೂ.

(ii) ಪಾದಚಾರಿಗಳು ಓಡಾಡಲು ಫುಟ್‌ಪಾತ್ ವ್ಯವಸ್ಥೆ ಸರಿಗಿರುವುದಿಲ್ಲ ಎಂತಲೂ.

(iii) ಬಹಳಷ್ಟು ಚಾಲಕರಿಗೆ ಸಂಚಾರಿ ವ್ಯವಸ್ಥೆ ಬಗ್ಗೆ ಸಾಮಾನ್ಯ ಜ್ಞಾನ ಇರುವುದಿಲ್ಲವಾದ್ದರಿಂದ ಪ್ರತಿ ನಿತ್ಯ ವಾಹನಗಳ ಅಪಘಾತಗಳು ಸಂಭವಿಸುತ್ತಲೇ ಇರುತ್ತವೆ ಎಂತಲೂ.

(iv) ನಗರದ ಹೃದಯ ಭಾಗದಲ್ಲಿ ಪ್ರತಿದಿನ ನರ್ಸರಿಯಿಂದ ವಿಶ್ವವಿದ್ಯಾಲಯಗಳವರೆಗೆ ಪ್ರತಿದಿನ 20000ಕ್ಕೂ ಹೆಚ್ಚು ವಿದ್ಯಾರ್ಥಿಗಳು ಓಡಾಡುತ್ತಿದ್ದು, 10000ಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಸಾರ್ವಜನಿಕರು ನಗರಕ್ಕೆ ಬಂದು ಹೋಗುತ್ತಾರೆ ಎಂತಲೂ,

(v) 1) ಇದನ್ನು ನಿಯಂತ್ರಿಸಲು ಬೆಂಗಳೂರು ಕಡೆಯಿಂದ ಬರುವ ವಾಹನಗಳು ಶಿವಕುಮಾರ ಸ್ವಾಮೀಜಿ ವೃತ್ತ ಮುಖಾಂತರ ಬಸ್ ನಿಲ್ದಾಣಕ್ಕೆ ಹಾಗೂ ನಗರದ ಒಳಭಾಗಕ್ಕೆ ಬರುವ ವಾಹನಗಳು ಬಿ.ಹೆಚ್. ರಸ್ತೆ ಮೂಲಕ ನೇರವಾಗಿ ಪ್ರವೇಶ ಮಾಡುವಂತೆ ಮತ್ತು

2) ಬೆಂಗಳೂರಿಗೆ ಹೋಗುವ ವಾಹನಗಳು ಬಿ.ಹೆಚ್. ರಸ್ತೆ ಮೂಲಕ ಪ್ರವೇಶ ಮಾಡದಂತೆ ನಿಷೇಧಿಸಿ, ಬದಲಿಗೆ ಗುಬ್ಬಿ ಕಡೆಯಿಂದ ಬೆಂಗಳೂರಿಗೆ ಹೋಗುವ ವಾಹನಗಳು ಟೌನ್ ಹಾಲ್ ವೃತ್ತದ ಮೂಲಕ ಅಶೋಕ ರಸ್ತೆ, ಚರ್ಚ್ ಸ್ಕ್ವೇರ್, ಕೋಡಿ ಸರ್ಕಲ್, ಕೋತಿ ತೋಪು ಮುಖಾಂತರ ಸಾಗುವಂತೆ ಮತ್ತು

3) ಚರ್ಚ್ ಸರ್ಕಲ್ ಮೂಲಕ ಗುಂಚಿ ಸರ್ಕಲ್, ಹೊರಪೇಟೆ ವೃತ್ತ ಇಲ್ಲಿಂದ ವಾಹನಗಳು ಬೆಂಗಳೂರು ಕಡೆ ಸಾಗುವಂತೆ ಆದರೆ, ಸರ್ವೋದಯ ಹೈಸ್ಕೂಲ್ ಕಡೆಯಿಂದ ಬಾರ್ ಲೈನ್ ರಸ್ತೆ ಮೂಲಕ ನಗರದೊಳಗೆ ಹೋಗದಂತೆ ಮತ್ತು

4) ಈ ಸ್ಥಳಗಳಲ್ಲಿ ನಿಲ್ಲಿಸುವ ವಾಹನಗಳ ನಿಲುಗಡೆಯನ್ನು ದಿನ ಬಿಟ್ಟು ದಿನಕ್ಕೆ ವಿರುದ್ಧ ದಿಕ್ಕಿನಲ್ಲಿ ನಿಲ್ಲಿಸುವಂತೆ ಬದಲಾವಣೆ ಮಾಡಬೇಕೆಂತಲೂ, ಹಾಗೂ

ಈ ಮೇಲ್ಕಂಡಂತೆ ಏಕ ಮುಖ ಸಂಚಾರಿ ವ್ಯವಸ್ಥೆಯನ್ನು ಜಾರಿಗೊಳಿಸಲು ಕೋರಿರುತ್ತಾರೆ.

2. ಜಿಲ್ಲಾ ಪೊಲೀಸ್ ಅಧೀಕ್ಷಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಂಜಸವಾಗಿ ಕಂಡು ಬಂದಿದ್ದು, ಮತ್ತು ಸಾರ್ವಜನಿಕರಿಗೆ ಸುಗಮ ಸಂಚಾರ ವ್ಯವಸ್ಥೆ ಕಲ್ಪಿಸುವ ದೃಷ್ಟಿಯಿಂದ ತುಮಕೂರು ನಗರದಲ್ಲಿ ಈ ಕೆಳಕಂಡ ರಸ್ತೆಗಳಲ್ಲಿ ವಾಹನಗಳ ಸಂಚಾರವನ್ನು ಏಕಮುಖ ಸಂಚಾರ ವ್ಯವಸ್ಥೆಯನ್ನು ಮಾಡುವುದು ಅವಶ್ಯಕವೆಂದು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಎಸ್.ಆರ್. ಉಮಾಶಂಕರ್, ಭಾ.ಆ.ಸೇ., ಜಿಲ್ಲಾಧಿಕಾರಿ ಹಾಗೂ ಜಿಲ್ಲಾದಂಡಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಮೋಟಾರ್ ವಾಹನ ಕಾಯಿದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲರ್ ಕಾಯಿದೆ 1960 ಕಲಂ 3ರ ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ತುಮಕೂರು ನಗರದಲ್ಲಿ ವಾಹನಗಳ ಸಂಚಾರವನ್ನು ಏಕಮುಖ ಸಂಚಾರ ವ್ಯವಸ್ಥೆ ಮಾಡಲು ಆದೇಶಿಸಿರುತ್ತೇನೆ.

1. ಬೆಂಗಳೂರು ಕಡೆಯಿಂದ ಬರುವ ವಾಹನಗಳು ಶಿವಕುಮಾರ ಸ್ವಾಮೀಜಿ ವೃತ್ತ ಮುಖಾಂತರ ಬಸ್ ನಿಲ್ದಾಣಕ್ಕೆ ಹಾಗೂ ನಗರದ ಒಳಭಾಗಕ್ಕೆ ಬರುವ ವಾಹನಗಳು ಬಿ.ಹೆಚ್. ರಸ್ತೆ ಮೂಲಕ ನೇರವಾಗಿ ಪ್ರವೇಶ ಮಾಡುವಂತೆ ಮತ್ತು
2. ಬೆಂಗಳೂರಿಗೆ ಹೋಗುವ ವಾಹನಗಳು ಬಿ.ಹೆಚ್. ರಸ್ತೆ ಮೂಲಕ ಪ್ರವೇಶ ಮಾಡದಂತೆ ನಿಷೇಧಿಸಿದೆ. ಬದಲಿಗೆ ಗುಬ್ಬಿ ಕಡೆಯಿಂದ ಬೆಂಗಳೂರಿಗೆ ಹೋಗುವ ವಾಹನಗಳು ಟೌನ್ ಹಾಲ್ ವೃತ್ತದ ಮೂಲಕ ಅಶೋಕ ರಸ್ತೆ, ಚರ್ಚ್ ಸರ್ಕಲ್, ಕೋಡಿ ಸರ್ಕಲ್, ಕೋತಿ ತೋಪು ಮುಖಾಂತರ ಸಾಗುವಂತೆ ಮತ್ತು
3. ಚರ್ಚ್ ಸರ್ಕಲ್ ಮೂಲಕ ಗುಂಚಿ ಸರ್ಕಲ್, ಹೊರಪೇಟೆ ವೃತ್ತ ಇಲ್ಲಿಂದ ವಾಹನಗಳು ಬೆಂಗಳೂರು ಕಡೆ ಸಾಗುವಂತೆ ಆದರೆ, ಸರ್ವೋದಯ ಹೈಸ್ಕೂಲ್ ಕಡೆಯಿಂದ ಬಾರ್ ಲೈನ್ ರಸ್ತೆ ಮೂಲಕ ನಗರದೊಳಗೆ ಹೋಗದಂತೆ ಮತ್ತು
4. ಈ ಸ್ಥಳಗಳಲ್ಲಿ ನಿಲ್ಲಿಸುವ ವಾಹನಗಳ ನಿಲುಗಡೆಯನ್ನು ದಿನ ಬಿಟ್ಟು ದಿನಕ್ಕೆ ವಿರುದ್ಧ ದಿಕ್ಕಿನಲ್ಲಿ ನಿಲ್ಲಿಸುವಂತೆ ಬದಲಾವಣೆ ಮಾಡಿದೆ ಹಾಗೂ
5. ಈ ಆದೇಶವನ್ನು ಅನುಸರಿಸಿ ಜಿಲ್ಲಾ ಆರಕ್ಷಕ ಅಧೀಕ್ಷಕರು ತುಮಕೂರು ಇವರು 1988ರ ಮೋಟಾರು ವಾಹನ ಕಾಯ್ದೆ ಕಲಂ 116 ಹಾಗೂ 1960ರ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಲಂ 4ರಲ್ಲಿರುವ ಅಧಿಕಾರದಂತೆ ಅವಶ್ಯಕ ಸ್ಥಳಗಳಲ್ಲಿ ನಾಮಫಲಕಗಳನ್ನು ಹಾಕಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತದಿಂದ ಮೊಹರಿನೊಂದಿಗೆ ದಿನಾಂಕ: 28.01.2006ರಂದು ಹೊರಡಿಸಿರುತ್ತೇನೆ.

**ಎಸ್.ಆರ್. ಉಮಾಶಂಕರ್**

ಪಿ.ಆರ್.512

ಜಿಲ್ಲಾಧಿಕಾರಿ ಹಾಗೂ ಜಿಲ್ಲಾದಂಡಾಧಿಕಾರಿ,

ತುಮಕೂರು ಜಿಲ್ಲೆ, ತುಮಕೂರು.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ
## ಪ್ರ.ಸಂಖ್ಯೆ:ಕಾಅದಾ: ಕಾನಪ:ಸಿಆರ್-18/ 2006, ದಿನಾಂಕ:17ನೇ ಜನವರಿ, 2006

**ಅರ್ಜಿದಾರರು**

1. ಲಕ್ಷ್ಮಿ ಸುರೇಬಾನ್ (ಮೀನಾಕ್ಷಿ) ಕೋಂ ಲೇಟ್ ಬುದ್ಯಪ್ಪಾ ಸುರೇಬಾನ್ 32 ವರ್ಷಗಳು.
2. ರಾಹುಲ್ ಬಿನ್ ಲೇಟ್ ಬುದ್ಯಪ್ಪಾ ಸುರೇಬಾನ್, 05 ವರ್ಷಗಳು.
3. ರೋಹ್ ಬಿನ್ ಲೇಟ್ ಬುದ್ಯಪ್ಪಾ ಸುರೇಬಾನ್, 03 ವರ್ಷಗಳು,

**ಎಲ್ಲರ ವಿಳಾಸ:** ವಿ.ವಿ. ಚಕ್ರದ್, 3ನೇ ಕ್ರಾಸ್, ಗಾಂಧಿನಗರ, ಹರಿಹರ.

**ಪ್ರತಿವಾದಿಗಳು**

1. ಸಿದ್ದಲಿಂಗೇಶ್ ಮಾಮದ್‌ಪುರ್ ಬಿನ್ ಬಸವರಾಜ್ ಮಾಮದ್‌ಪುರ್, ಲಾರಿ ಮಾಲೀಕರು, ನಂ.ಕೆಎ.25.ಬಿ:2841, ಹನುಮಾನ್ ದೇವಸ್ಥಾನದ ಹತ್ತಿರ, ಯಲ್ಲಾಪುರ್ ಓಣಿ, ಹುಬ್ಬಳ್ಳಿ.
2. ದಿ ಮೇನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಶ್ರೀನಾಥ ಕಾಂಪ್ಲೆಕ್ಸ್, ಕಾಟನ್ ಮಾರ್ಕೇಟ್, ಹುಬ್ಬಳ್ಳಿ.

**ಪ್ರಕಟಣೆ**

ಶ್ರೀಮತಿ ಲಕ್ಷ್ಮಿ ಸುರೇಬಾನ್, ರಾಹುಲ್, ರೋಹನ್ ಇವರುಗಳಾದ ತಾವು ಮೃತ ಬುದ್ಯಪ್ಪಾ ಸುರೇಬಾನ್ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬುದ್ಯಪ್ಪಾ ಸುರೇಬಾನ್ ರವರು ಒಂದನೇ ಪ್ರತಿವಾದಿಗಳಾದ ಸಿದ್ದಲಿಂಗೇಶ್ ಮಾಮದ್‌ಪುರ್ ಇವರ ಲಾರಿಯಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.186

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ
## ಪ್ರ.ಸಂಖ್ಯೆ:ಕಾಅದಾ: ಕಾನಪ:ಸಿಆರ್-315/ 2005, ದಿನಾಂಕ:31ನೇ ಡಿಸೆಂಬರ್, 2005

**ಅರ್ಜಿದಾರರು**

1. ಡಿ. ಜುಬೇದಾಬೀ ಕೋಂ ಡಿ. ಅಜ್ಜಮತುಲ್ಲಾ, 3ನೇ ವಾರ್ಡ್, ಚಿತ್ತರಗೇರಿ, ಹರಪನಹಳ್ಳಿ.

**ಪ್ರತಿವಾದಿಗಳು**

1. ಶಬ್ಬೀರ್ ಸಾಬ್, ಟ್ರಕ್ ಮಾಲೀಕರು, ನಂ.ಕೆ.ಎ. 35/ 2703 ವಾಸ: ಯಶವಂತನಗರ, ಸಂಡೂರು, ಬಳ್ಳಾರಿ ಜಿಲ್ಲೆ.
2. ಬ್ರಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಸ್ಟೇಷನ್ ರಸ್ತೆ, ಹೊಸಪೇಟೆ, ಬಳ್ಳಾರಿ ಜಿಲ್ಲೆ.

**ಪ್ರಕಟಣೆ**

ಶ್ರೀಮತಿ ಜುಬೇದಾಬೀ (ತಾಯಿ) ಇವರುಗಳಾದ ತಾವು ಮೃತ ಮೆಹಬೂಬ್ ಬಾಷ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೆಹಬೂಬ್ ಬಾಷ ರವರು ಒಂದನೇ ಪ್ರತಿವಾದಿಗಳಾದ ಶಬ್ಬಿರ್‌ಸಾಬ್ ಇವರ ಟ್ರಕ್‌ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.187

## ಕೃಷಿ ಮಾರಾಟ ಇಲಾಖೆ
## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು-01
## ಅಧಿಸೂಚನೆ
## ಸಂಖ್ಯೆ:ಕೃಮಾಇ:336:ನಿಯವಿ:2004, ದಿನಾಂಕ:17ನೇ ಜನವರಿ, 2006

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾಗಿದ್ದ ಅಧಿಸೂಚನೆ ಸಂಖ್ಯೆ: ಕೃಮಾಇ: 65: ನಿಯವಿ:2000, ದಿನಾಂಕ: 05.10.2000 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ರಲ್ಲಿ ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮುಳಬಾಗಿಲು ಸಮಿತಿ ವ್ಯಾಪ್ತಿಯ ಎನ್.ವಡ್ಡಹಳ್ಳಿ ಗ್ರಾಮ ಪಂಚಾಯಿತಿಯೊಳಗಿನ ಪ್ರದೇಶವನ್ನು "ಉಪ ಮಾರುಕಟ್ಟೆ" ಎಂದು ಮತ್ತು ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಉಪಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಿದ್ದರು.

ಮುಳಬಾಗಿಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಹೊಸದಾಗಿ ಖರೀದಿಸಿರುವ ಎನ್.ವಡ್ಡಹಳ್ಳಿ ಗ್ರಾಮದ ಸರ್ವೆ ನಂ. 4:2, 4:3, 4:4, 4:5 ಮತ್ತು 6ರಲ್ಲಿನ 4 ಎಕರೆ 31 ಗುಂಟೆ ವಿಸ್ತೀರ್ಣದ ಈ ಕೆಳಕಂಡ ಅನುಸೂಚಿಯಲ್ಲಿನ ಸ್ಥಳವನ್ನು ಸದರಿ ಅಧಿಸೂಚನೆಯಲ್ಲಿ ಹೊರಡಿಸಲಾದ ಉಪಮಾರುಕಟ್ಟೆ ಪ್ರಾಂಗಣದ ಬದಲು "ಉಪಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಲಾಗಿದೆ.

ಮತ್ತು ಆದಕಾರಣ, ಸದರಿ ಅಧಿಸೂಚನೆಯಲ್ಲಿ ಘೋಷಿಸಲ್ಪಟ್ಟಿರುವ ಉಪಮಾರುಕಟ್ಟೆಯ ಈಗಿನ ಉಪಮಾರುಕಟ್ಟೆ ಪ್ರಾಂಗಣದ ಬದಲು ಎನ್.ವಡ್ಡಹಳ್ಳಿ ಗ್ರಾಮದ ಸರ್ವೆ ನಂ.4:2, 4:3, 4:4, 4:5 ಮತ್ತು 6ರಲ್ಲಿನ 4 ಎಕರೆ 31 ಗುಂಟೆಗಳ ಸ್ಥಳವನ್ನು "ಉಪಮಾರುಕಟ್ಟೆ ಪ್ರಾಂಗಣ" ವೆಂದು ಘೋಷಿಸಲು ಅಧಿಸೂಚನೆ ಸಂಖ್ಯೆ: ಕೃಮಾ೯:336: ನಿಯವಿ: 2004, ದಿನಾಂಕ: 12.07.2005ರ ಮೂಲಕ ಕರ್ನಾಟಕ ರಾಜ್ಯಪತ್ರ ಭಾಗ-3, ದಿನಾಂಕ: 04.08.2005ರಲ್ಲಿ ಉದ್ದೇಶವನ್ನು ಪ್ರಕಟಿಸಲಾಗಿದೆ ಮತ್ತು ಸದರಿ ಪ್ರಸ್ತಾವನೆ ಸಂಬಂಧಿಸಿದಂತೆ ಆಕ್ಷೇಪಣೆ/ ಸಲಹೆಗಳನ್ನು ಕೇಳಲಾಗಿತ್ತು. ಸದರಿ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ/ ಸಲಹೆಗಳು ಬಂದಿರುವುದಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ 27) ಪ್ರಕರಣ 6ರ ಉಪಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ಸದರಿ ಅಧಿಸೂಚನೆಯನ್ನು ಭಾಗಶಃ ಮಾರ್ಪಡಿಸಿ, ಮುಳಬಾಗಿಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಅಧಿಸೂಚನೆಗಳ ಮೂಲಕ ಘೋಷಿಸಲಾಗಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಎನ್.ವಡ್ಡಹಳ್ಳಿ ಗ್ರಾಮದ ಪರಿಮಿತಿಯೊಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು "ಉಪಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

**ಅನುಸೂಚಿ**

ಮುಳಬಾಗಿಲು ತಾಲ್ಲೂಕು ಕಸಬಾ ಹೋಬಳಿ ಎನ್.ವಡ್ಡಹಳ್ಳಿ ಗ್ರಾಮದ ಸರ್ವೆ ನಂ.4:2, 4:3, 4:4, 4:5 ಮತ್ತು 6ರಲ್ಲಿನ 4 ಎಕರೆ 31 ಗುಂಟೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ:

ಪೂರ್ವಕ್ಕೆ - ರಾಜಾಕಾಲುವೆ ಮತ್ತು ಎನ್.ವಿ. ವೆಂಕಟಸ್ವಾಮಿ ಜಮೀನು.
ಪಶ್ಚಿಮಕ್ಕೆ - ಶಿವಶಂಕರ್ ಮತ್ತು ರಾಮೇಗೌಡರವರ ಜಮೀನು.
ಉತ್ತರಕ್ಕೆ - ಚೌಡಯ್ಯ ಮತ್ತು ನಾರಾಯಣಪ್ಪರವರ ಜಮೀನು.
ದಕ್ಷಿಣಕ್ಕೆ - ರಾಷ್ಟ್ರೀಯ ಹೆದ್ದಾರಿ.

**ಸೈಯದ್ ಜಮೀರ್ ಪಾಷಾ**
ನಿರ್ದೇಶಕರು.

ಪಿ.ಆರ್.188

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ, ಬೆಂಗಳೂರು

### ಸಾರ್ವಜನಿಕ ಪ್ರಕಟಣೆ

### ಸಂಖ್ಯೆ: ಎಲ್‌ಎನ್‌ಡಿ:ಸಿಆರ್:155: 2005-06, ಬೆಂಗಳೂರು, ದಿನಾಂಕ: 19ನೇ ಜನವರಿ, 2006

### ನಮೂನೆ-27

### 94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಗುಂಡು ತೋಪು: ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಗುಂಡು ತೋಪು ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸರ್ಕಾರಿ ಗುಂಡು ತೋಪು ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿದೆ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಸರ್ಕಾರಿ ಗುಂಡು ತೋಪು ಹಕ್ಕಿನ ಜೊತೆಗೆ ಸದರಿ ಸರ್ಕಾರಿ ಗುಂಡು ತೋಪು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುವುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಹಾಗೂ ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರ್‌ರವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಸರ್ಕಾರಿ ಗುಂಡು ತೋಪು ಭಾಗ ಇತ್ಯಾದಿ ಇರುವ ಗ್ರಾಮಗಳು | ಗೆದ್ದಲಹಳ್ಳಿ. |
| ತಾಲ್ಲೂಕುಗಳು | ಬೆಂಗಳೂರು ಪೂರ್ವ |
| ಜಿಲ್ಲೆ | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸರ್ಕಾರಿ ಗುಂಡು ತೋಪು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | 0-11 |
| ಮೇರೆ | ಉತ್ತರ : ಕೊತ್ತನೂರು ಗಡಿ, ಪೂರ್ವಕ್ಕೆ: ಹಳ್ಳ ಭೈರತಿ ಗಡಿ, ದಕ್ಷಿಣಕ್ಕೆ: ಸ.ನಂ.34, ಪಶ್ಚಿಮಕ್ಕೆ: ಸ.ನಂ.34. |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ ದಾರಿ ಅಥವಾ ಅದರ ಭಾಗ | ಗುಂಡು ತೋಪು |

ತಹಶೀಲ್ದಾರರು,
ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

ಪಿ.ಆರ್.189

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ, ಬೆಂಗಳೂರು**

**ಸಾರ್ವಜನಿಕ ಪ್ರಕಟಣೆ**

**ಸಂಖ್ಯೆ: ಎಲ್‌ಎನ್‌ಡಿ:ಸಿಆರ್:156: 2005-06, ಬೆಂಗಳೂರು, ದಿನಾಂಕ: 19ನೇ ಜನವರಿ, 2006**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಗುಂಡು ತೋಪು: ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಗುಂಡು ತೋಪು ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸರ್ಕಾರಿ ಗುಂಡು ತೋಪು ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿದೆ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಸರ್ಕಾರಿ ಗುಂಡು ತೋಪು ಹಕ್ಕಿನ ಜೊತೆಗೆ ಸದರಿ ಸರ್ಕಾರಿ ಗುಂಡು ತೋಪು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುವುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಹಾಗೂ ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರ್‌ರವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಸರ್ಕಾರಿ ಗುಂಡು ತೋಪು ಭಾಗ ಇತ್ಯಾದಿ ಇರುವ ಗ್ರಾಮಗಳು | ಗೆದ್ದಲಹಳ್ಳಿ. |
| ತಾಲ್ಲೂಕುಗಳು | ಬೆಂಗಳೂರು ಪೂರ್ವ |
| ಜಿಲ್ಲೆ | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸರ್ಕಾರಿ ಗುಂಡು ತೋಪು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | 0-12 ಗುಂಟೆ |
| ಮೇರೆ | ಉತ್ತರ : ಸ.ನಂ.5, ದಕ್ಷಿಣಕ್ಕೆ: ಸ.ನಂ.8, ಪೂರ್ವಕ್ಕೆ:ಸ.ನಂ.5,9, ಪಶ್ಚಿಮಕ್ಕೆ: ಸ.ನಂ.6. |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ ದಾರಿ ಅಥವಾ ಅದರ ಭಾಗ | ಸರ್ಕಾರಿ ಗುಂಡು ತೋಪು |

ತಹಶೀಲ್ದಾರರು,
ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

ಪಿ.ಆರ್.190

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 01 ಪಿಪಿಇ 2006, ಬೆಂಗಳೂರು, ದಿನಾಂಕ:19ನೇ ಜನವರಿ, 2006**

ಈ ಕೆಳಕಂಡ ತಃಖ್ತೆಯ ಅಂಕಣ (2)ರಲ್ಲಿ ಸೂಚಿಸಿರುವ ನ್ಯಾಯಾಲಯಗಳಲ್ಲಿ ತಃಖ್ತೆಯ ಅಂಕಣ (3) ಮತ್ತು (4)ರಲ್ಲಿ ನಮೂದಿಸಿರುವ ಪ್ರಕರಣ ಮತ್ತು ಪ್ರತಿ ಪ್ರಕರಣಗಳು ದಾಖಲಾಗಿರುತ್ತವೆ. ಆದ ಕಾರಣ, ಅಂಕಣ (4)ರಲ್ಲಿ ನಮೂದಿಸಿರುವ ಪ್ರತಿ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು ಅಂಕಣ (5)ರಲ್ಲಿ ಸೂಚಿಸಿರುವ ಅಭಿಯೋಜಕರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದೆ.

| ಕ್ರ. ಸಂ. | ನ್ಯಾಯಾಲಯದ ಹೆಸರು | ಪ್ರಕರಣ ಸಂಖ್ಯೆ ಸಿ.ಸಿ/ ಎನ್‌ಸಿ/ ವಿ.ಸಿ.ಸಿ. | ಪ್ರತಿ ಪ್ರಕರಣ ಸಂಖ್ಯೆ ವಿ.ಸಿಸಿ.ಸಿ/ ವಿ.ಸಿ.ಸಿ. | ಪ್ರಕರಣದಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು |
|---|---|---|---|---|
| 1 | 2 | 3 | 4 | 5 |
| 1. | 5ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಮೈಸೂರು. | 271/04 | 156/05 | ವಿಶೇಷ ಸರ್ಕಾರಿ ಅಭಿಯೋಜಕರು 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಮೈಸೂರು. |
| 2. | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಯಾದಗಿರಿ. | 8/02 | 4/02 | ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗುಲ್ಬರ್ಗಾ. |
| 3. | ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಗುಲ್ಬರ್ಗಾ | 398/05 | 399/05 | 1ನೇ ಸಹಾಯಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ. |
| 4. | ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಗುಲ್ಬರ್ಗಾ. | 1443/04 | 1444/04 | 1ನೇ ಸಹಾಯಕ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ. |
| 5. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ. | 62/02 | 63/02 | ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಕೊಪ್ಪಳ. |

| 1 | 2 | 3 | 4 | 5 |
|---|---|---|---|---|
| 6. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾಸನ. | 47/03 | 11/03 | ವಿಶೇಷ ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾಸನ. |
| 7. | 3ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ. | 91/05 | 92/05 | 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಳಗಾವಿ. |
| 8. | ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ. | 32/05 | 33/05 | 2ನೇ ಅಪರ ಸರ್ಕಾರಿ ಅಭಿಯೋಜಕರು, ಧಾರವಾಡ. |
| 9. | 2ನೇ ಅಧಿಕ ಜಿಲ್ಲಾ ಮತ್ತು ಸತ್ರ (ವಿಶೇಷ) ನ್ಯಾಯಾಲಯ, ಬಿಜಾಪುರ. | 8/04 | 45/05 | 1ನೇ ಅಪರ ಸರ್ಕಾರಿ ಅಭಿಯೋಜಕರು, ಬಿಜಾಪುರ. |
| 10. | ಜಿಲ್ಲಾ ತ್ವರಿತ ವಿಲೇವಾರಿ ನ್ಯಾಯಾಲಯ, ಹೊಸಪೇಟೆ. | 66/04 | 130/04 | ಅಪರ ಸರ್ಕಾರಿ ಅಭಿಯೋಜಕರು, ಹೊಸಪೇಟೆ. |
| 11. | ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ. | 5/05 | 7/05 | 2ನೇ ಅಪರ ಸರ್ಕಾರಿ ಅಭಿಯೋಜಕರು, ಧಾರವಾಡ. |
| 12. | ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ನವಲಗುಂದ. | 24/04 | 89/04 | ಸಹಾಯಕ ಸರ್ಕಾರಿ ಅಭಿಯೋಜಕರು, ನರಗುಂದ. |
| 13. | 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ರಾಯಚೂರು. | 66/05 | 120/05 | 1ನೇ ವಿಶೇಷ ಸರ್ಕಾರಿ ಅಭಿಯೋಜಕರು, ರಾಯಚೂರು. |
| 14. | 4ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಮಂಡ್ಯ. | 34/00 | 40/04 | ಅಪರ ಸರ್ಕಾರಿ ಅಭಿಯೋಜಕರು, ಮಂಡ್ಯ. |
| 15. | 2ನೇ ಅಧಿಕ ಜಿಲ್ಲಾ ಮತ್ತು ಸತ್ರ (ವಿಶೇಷ) ನ್ಯಾಯಾಲಯ, ಬಿಜಾಪುರ. | 126/05 | 125/05 | 1ನೇ ಅಪರ ಸರ್ಕಾರಿ ಅಭಿಯೋಜಕರು, ಬಿಜಾಪುರ. |
| 16. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾಸನ. | 10/2000 | 177/02 | ವಿಶೇಷ ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾಸನ. |
| 17. | 2ನೇ ಅಪರ ಸತ್ರ ನ್ಯಾಯಾಲಯ, ತುಮಕೂರು. | 105/96 | 40/97 | 1ನೇ ಅಪರ ಸರ್ಕಾರಿ ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು. |
| 18. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 787/03 | 820/03 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 19. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 768/03 | 769/03 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 20. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 1196/01 | 08/02 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 21. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 867/01 | 901/01 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 22. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 792/02 | 765/02 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 23. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 806/03 | 807/03 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 24. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 369/04 | 148/04 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 25. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 241/02 | 320/02 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 26. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 791/01 | 873/01 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |
| 27. | ಜೆಎಂಎಫ್‌ಸಿ ನ್ಯಾಯಾಲಯ, ಗುಬ್ಬಿ. | 762/01 | 965/01 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ತುಮಕೂರು. |

| 1 | 2 | 3 | 4 | 5 |
|---|---|---|---|---|
| 28. | 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೀದರ್. | 114/02 | 35/04 | ಅಪರ ಸರ್ಕಾರಿ ಅಭಿಯೋಜಕರು, ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್. |
| 29. | 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹುಬ್ಬಳ್ಳಿ. | 23/04 | 49/04 | 1ನೇ ಅಧಿಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್. |
| 30. | 1ನೇ ಅಧಿಕ ಸತ್ರ ನ್ಯಾಯಾಲಯ, ಹುಬ್ಬಳ್ಳಿ. | 91/02 | 88/03 | ಸರ್ಕಾರಿ ಅಭಿಯೋಜಕರು, ಸತ್ರ ನ್ಯಾಯಾಲಯ, ಹುಬ್ಬಳ್ಳಿ. |
| 31. | ಜೆಎಂಎಫ್‌ಸಿ ನ್ಯಾಯಾಲಯ, ಗೋಕಾಕ್. | 1140/04 | 1180/04 | ಹೆಚ್ಚುವರಿ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 32. | 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ. | 26/01 | 12/02 | ವಿಶೇಷ ಸರ್ಕಾರಿ ಅಭಿಯೋಜಕರು, 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ. |
| 33. | 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ. | 14/04 | 8/04 | ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ. |
| 34. | 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ. | 18/03 | 99/03 | ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ. |
| 35. | 1ನೇ ಅಪರ ಸತ್ರ ನ್ಯಾಯಾಲಯ, ಮಂಗಳೂರು. | 127/98 | 62/99 | 1ನೇ ಅಪರ ಸರ್ಕಾರಿ ಅಭಿಯೋಜಕರು, 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಮಂಗಳೂರು. |
| 36. | ಪ್ರಧಾನ ಜಿಲ್ಲಾ ಸತ್ರ ನ್ಯಾಯಾಲಯ, ಬೀದರ್. | 21/04 | 65/04 | ವಿಶೇಷ ಸರ್ಕಾರಿ ಅಭಿಯೋಜಕರು, 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೀದರ್. |
| 37. | ತ್ವರಿತ ವಿಲೇವಾರಿ ನ್ಯಾಯಾಲಯ, ಹೊಸಪೇಟೆ. | 65/04 | 130/04 | ಪ್ರಧಾನ ಸರ್ಕಾರಿ ಅಭಿಯೋಜಕರು, ಬಳ್ಳಾರಿ. |
| 38. | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ. | 39/05 | 96/05 | ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ. |
| 39. | ಜೆಎಂಎಫ್‌ಸಿ 1ನೇ ನ್ಯಾಯಾಲಯ, ದಾವಣಗೆರೆ. | 2836/05 | 2594/05 | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ದಾವಣಗೆರೆ. |
| 40. | ಜೆಎಂಎಫ್‌ಸಿ ನ್ಯಾಯಾಲಯ, ಗದಗ. | 139/04 | 257/04 | ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ನ್ಯಾಯಾಲಯ, ಗದಗ. |
| 41. | 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಹಾಸನ. | 35/03 | 99/02 | ಪ್ರಧಾನ ಸರ್ಕಾರಿ ಅಭಿಯೋಜಕರು, ಹಾಸನ. |
| 42. | ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ. | 12/04 | 80/05 | ಪ್ರಧಾನ ಸರ್ಕಾರಿ ಅಭಿಯೋಜಕರು, ಚಿತ್ರದುರ್ಗ. |
| 43. | ಜೆಎಂಎಫ್‌ಸಿ ನ್ಯಾಯಾಲಯ, ಶಿವಮೊಗ್ಗ. | 5660/04 | 8271/00 | ಸಹಾಯಕ ಅಭಿಯೋಗ ನಿರ್ದೇಶಕರು, ಎಸ್.ಪಿ. ಕಛೇರಿ, ಶಿವಮೊಗ್ಗ. |
| 44. | ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ. | 11/05 | 71/05 | ಸರ್ಕಾರಿ ಅಭಿಯೋಜಕರು, ಚಿತ್ರದುರ್ಗ. |
| 45. | ಜೆಎಂಎಫ್‌ಸಿ ನ್ಯಾಯಾಲಯ, ರಾಮದುರ್ಗ. | 202/05 | 190/05 | ಸಹಾಯಕ ಸರ್ಕಾರಿ ಅಭಿಯೋಜಕರು, ಬೈಲಹೊಂಗಲ. |
| 46. | ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಮದ್ದೂರು. | 289/05 | 290/05 | ಸಹಾಯಕ ಸರ್ಕಾರಿ ಅಭಿಯೋಜಕರು, ಮದ್ದೂರು. |
| 47. | 2ನೇ ಜೆಎಂಎಫ್‌ಸಿ ನ್ಯಾಯಾಲಯ, ಚಿತ್ರದುರ್ಗ. | 980/04 | 248/05 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಚಿತ್ರದುರ್ಗ. |
| 48. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ. | 84/05 | 90/05 | ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬಾಗಲಕೋಟೆ. |
| 49. | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಮಂಡ್ಯ. | 40/05 | 107/05 | ವಿಶೇಷ ಸರ್ಕಾರಿ ಅಭಿಯೋಜಕರು, 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ದಾವಣಗೆರೆ. |

| 1 | 2 | 3 | 4 | 5 |
|---|---|---|---|---|
| 50. | 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ದಾವಣಗೆರೆ. | 116/05 | 2/05 | ವಿಶೇಷ ಸರ್ಕಾರಿ ಅಭಿಯೋಜಕರು, 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ದಾವಣಗೆರೆ. |
| | | 63/05 | 16/05 | |
| 51. | 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು. | 41/04 | 159/04 | ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು. |
| | | 272/02 | 327/02 | |
| 52. | ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 536/04 | 545/04 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 53. | ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 1125/03 | 1137/03 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 54. | ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 647/04 | 616/04 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 55. | ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 21/04 | 27/04 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 56. | ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 382/04 | 448/04 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 57. | ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 809/05 | 817/05 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 58. | ಜೆಎಂಎಫ್‌ಸಿ ನ್ಯಾಯಾಲಯ, ನಿಪ್ಪಾಣಿ. | 573/05 | 574/05 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ರಾಯಭಾಗ. |
| 59. | 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಕೋಲಾರ. | 98/03 | 102/03 | ವಿಶೇಷ ಸರ್ಕಾರಿ ಅಭಿಯೋಜಕರು, 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಕೋಲಾರ. |
| 60. | 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಕೋಲಾರ. | 102/03 | 98/03 | ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್.183

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ ಮತ್ತು ಅಭಿಯೋಗಗಳು).

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ, ಬೆಂಗಳೂರು

## ಸಾರ್ವಜನಿಕ ಪ್ರಕಟಣೆ

**ಸಂಖ್ಯೆ: ಎಲ್‌ಎನ್‌ಡಿ:ಸಿಆರ್:56: 2005-06, ಬೆಂಗಳೂರು, ದಿನಾಂಕ:19ನೇ ಜನವರಿ, 2006**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಬಂಡೆ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಸರ್ಕಾರಿ ಬಂಡೆ ಜಮೀನಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸರ್ಕಾರಿ ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿದೆ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಸರ್ಕಾರಿ ಜಮೀನಿನ ಹಕ್ಕಿನ ಜೊತೆಗೆ ಸದರಿ ಸರ್ಕಾರಿ ಜಮೀನಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುವುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಹಾಗೂ ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರ್‌ರವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| ಸರ್ಕಾರಿ ಜಮೀನಿನ ಭಾಗ ಇತ್ಯಾದಿ ಇರುವ ಗ್ರಾಮಗಳು : | ಕೊಡತಿ ಗ್ರಾಮ |
|---|---|
| ತಾಲ್ಲೂಕು | ಬೆಂಗಳೂರು ಪೂರ್ವ |
| ಜಿಲ್ಲೆ | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಸರ್ಕಾರಿ (ಬಂಡೆ) |
| ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | 10-00 ಎಕರೆ |
| ಮೇರೆ | ಪೂರ್ವಕ್ಕೆ: ಇದೇ ಸ.ನಂ. ಜಮೀನು,<br>ಪಶ್ಚಿಮಕ್ಕೆ: ಹಾಡೋಸಿದ್ದಾಪುರ ಗಡಿ,<br>ಉತ್ತರಕ್ಕೆ: ಸ.ನಂ.95ರ ಜಮೀನು,<br>ದಕ್ಷಿಣಕ್ಕೆ: ಇದೇ ಸ.ನಂ. ಜಮೀನು. |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ ದಾರಿ ಅಥವಾ ಅದರ ಭಾಗ | ಸರ್ಕಾರಿ (ಬಂಡೆ ಕುಂಟೆ) |

ತಹಶೀಲ್ದಾರರು,

ಪಿ.ಆರ್.191 ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ, ಬೆಂಗಳೂರು**

**ಸಾರ್ವಜನಿಕ ಪ್ರಕಟಣೆ**

**ಸಂಖ್ಯೆ: ಎಲ್‌ಎನ್‌ಡಿ:ಸಿಆರ್:157: 2005-06, ಬೆಂಗಳೂರು, ದಿನಾಂಕ:19ನೇ ಜನವರಿ, 2006**

**ನಮೂನೆ-27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಧರ್ಮದ ತೋಪು ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಧರ್ಮದ ತೋಪು ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಧರ್ಮದ ತೋಪು ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿದೆ ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಧರ್ಮದ ತೋಪು ಹಕ್ಕಿನ ಜೊತೆಗೆ ಸದರಿ ಧರ್ಮದ ತೋಪು ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುವುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಹಾಗೂ ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂದಿಸಿರುವಂತೆ ಡೆಪ್ಯೂಟಿ ಕಮೀಷನರ್‌ರವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| ಧರ್ಮದ ತೋಪು ಭಾಗ ಇತ್ಯಾದಿ ಇರುವ ಗ್ರಾಮಗಳು : | ಕಾಡುಗೋಡಿ |
|---|---|
| ತಾಲ್ಲೂಕು | ಬೆಂಗಳೂರು ಪೂರ್ವ |
| ಜಿಲ್ಲೆ | ಬೆಂಗಳೂರು ನಗರ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಧರ್ಮದ ತೋಪು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ | 1-31 ಎಕರೆ ಗುಂಟೆ |
| ಮೇರೆ | ಪೂರ್ವಕ್ಕೆ: 95ರ ಉಳಿಕೆ ಜಮೀನು.<br>ಪಶ್ಚಿಮಕ್ಕೆ: 296ರ ಜಮೀನು.<br>ಉತ್ತರಕ್ಕೆ: ಸ.ನಂ.297.<br>ದಕ್ಷಿಣಕ್ಕೆ: 294ರ ಜಮೀನು. |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ ದಾರಿ ಅಥವಾ ಅದರ ಭಾಗ | ಧರ್ಮದ ತೋಪು |

ತಹಶೀಲ್ದಾರರು,

ಪಿ.ಆರ್.192 ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ.

## UNIVERSITY OF AGRICULTURAL SCIENCES
### Administrative Office GKVK, Bangalore-560 065
### NOTIFICATION No. AO/RSP/C&RR-Typist/2005-06, Dated: 21st December 2005

Amendment to the Cadre and Recruitment Regulations of the Service Personnel of the University of Agricultural Sciences, Bangalore.

In exercise of the power conferred under Statute 32 of UAS Statute 1963, the Board of Regents of the University of Agricultural Sciences, Bangalore is pleased to amend the Cadre and Recruitment Regulations of Service Personnel vide decision taken in 312th Meeting held on 26.10.2005, Item-10 as here under.

This amended regulations shall come into force from the date of publication in the Karnataka Gazette.

The designation & Qualification of existing Cadre of Typist at Sl.No.12 of the Cadre & Recruitment Regulations is amended as follows.

| Sl. No. | Name of the Post and Scale of Pay | No. of Posts | | Method of Recruitment | Qualification |
|---|---|---|---|---|---|
| | | Non Plan | Plan | | |
| 12 | Typist-cum-Computer Operator Rs.3850-7050 | 77 | 31 | By Direct Recruitment | a) Must have passed a Bachelors Degree of recognised University.<br>b) Should have passed Junior Typewriting in English and Kannada by the Board of Commercial Examination of Government of Karnataka.<br>c) Should posses a Certificate of Computer Science of not less than 6 months duration from the institution recognised by the Government of Karnataka / Government of India. However, the candidates having Bachelor degree in Computer Science to be exempted from possessing the Certificate in Computer Science of 6 months duration from the institution recognised by the GOK/GOI. |

P.D. 20 Administrative Officer, University of Agricultural Sciences, Bangalore.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**ಅಧಿಸೂಚನೆ ಸಂಖ್ಯೆ: ಸಿಆಸುಇ 322 ಸಅರ 2005, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಈ ಕೆಳಕಂಡ ಅಧಿಕಾರಿಗಳ ರಜೆ ಖಾತೆಯಲ್ಲಿ ದಿನಾಂಕ: 31.12.2005ರ ಅಂತ್ಯಕ್ಕೆ ಗರಿಷ್ಟ ಮೊತ್ತದ 240 ದಿನಗಳು ಗಳಿಕೆ ರಜೆ ಮೀರುತ್ತಿರುವ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 22 ಎಸ್‌ಆರ್‌ಎಸ್ 2004, ದಿನಾಂಕ: 8.4.2005ರ ಮೇರೆಗೆ ಅವರ ಹಕ್ಕಿನಲ್ಲಿರುವ ಗಳಿಕೆ ರಜೆಯಲ್ಲಿ 30 ದಿನಗಳನ್ನು ದಿನಾಂಕ: 31.12.2005 ರಂದು ಒಪ್ಪಿಸಿಕೊಂಡು 2005–2006 ಬ್ಲಾಕ್‌ನಲ್ಲಿ ರಜೆ ನಗದೀಕರಣ ಸೌಲಭ್ಯ ಪಡೆಯಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯವರ ಹೆಸರು ಹುದ್ದೆ ಮತ್ತು ಪದನಾಮ **ಶ್ರೀ : ಶ್ರೀಮತಿ** | ನಗದೀಕರಣ ಮಂಜೂರಾದ ನಂತರ ಖಾತೆಯಲ್ಲಿ ಜಮೆ ಇರುವ ಗಳಿಕೆ ರಜೆ |
|---|---|---|
| 1 | 2 | 3 |
| 1 | ಜಿ.ಕೆ.ಬೋರೇಗೌಡ, ಸರ್ಕಾರದ ಕಾರ್ಯದರ್ಶಿ<br>ಸಂ.ವ್ಯ. ಮತ್ತು ಶಾ.ರ.ಇಲಾಖೆ | 225 ದಿನಗಳು |
| 2 | ಡಾ: ಹೆಚ್.ಹೊನ್ನೇಗೌಡ, ನಿರ್ದೇಶಕರು,<br>ಮಾ.ತಂ. ಜೈ.ತಂ. ಮತ್ತು ವಿ.ತಂ.ಇಲಾಖೆ | 225 ದಿನಗಳು |
| 3 | ಎಂ.ಅಬ್ದುಲ್ ಬಾಸಿತ್, ಹಿರಿಯ ನಿರ್ದೇಶಕರು<br>ಯೋಜನಾ ಇಲಾಖೆ | 225 ದಿನಗಳು |
| 4 | ಭಾ.ಭೀ.ಪತ್ತಾರ, ಜಂ.ಪ್ರಾ. ಹಾಗೂ ಪ.ನಿ. ಸ.ಜಂ.ಕಾ.<br>ಸಂ.ವ್ಯ. ಮತ್ತು ಶಾ.ರ.ಇಲಾಖೆ | 218 ದಿನಗಳು |
| 5 | ಎಲ್.ಸಿದ್ದಯ್ಯ, ಜಂ.ಪ್ರಾ. ಹಾಗೂ ಪ.ನಿ. ಸ.ಜಂ.ಕಾ.<br>ಸಂ.ವ್ಯ. ಮತ್ತು ಶಾ.ರ.ಇಲಾಖೆ | 219 ದಿನಗಳು |
| 6 | ಆರ್.ನಾರಾಯಣಮೂರ್ತಿ, ಉ.ಕಾ.<br>ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿ | 213 ದಿನಗಳು |
| 7 | ಎಂ.ಡಿ.ರವೀಂದ್ರನಾಥ್, ಉ.ಕಾ.<br>ವಾ.ಪ್ರ. ಮತ್ತು ಯು.ಸೇ.ಇಲಾಖೆ | 225 ದಿನಗಳು |

| ಕ್ರಮ ಸಂಖ್ಯೆ | ಅಧಿಕಾರಿಯವರ ಹೆಸರು ಹುದ್ದೆ ಮತ್ತು ಪದನಾಮ **ಶ್ರೀ : ಶ್ರೀಮತಿ** | ನಗದೀಕರಣ ಮಂಜೂರಾದ ನಂತರ ಖಾತೆಯಲ್ಲಿ ಜಮೆ ಇರುವ ಗಳಿಕೆ ರಜೆ |
|---|---|---|
| 8 | ರಿಚಾರ್ಡ್ ಲೋಬೋ, ಸ.ಪ್ರಾ. ಮತ್ತು ಪ.ನಿ.ಸ.ಉ.ಕಾ. ಸಂ.ವ್ಯ. ಮತ್ತು ಶಾ.ರ.ಇಲಾಖೆ | 225 ದಿನಗಳು |
| 9 | ಕೆ.ದ್ವಾರಕನಾಥ್‌ಬಾಬು, ಸ.ಪ್ರಾ. ಮತ್ತು ಪ.ನಿ.ಸ.ಉ.ಕಾ. ಸಂ.ವ್ಯ. ಮತ್ತು ಶಾ.ರ.ಇಲಾಖೆ | 225 ದಿನಗಳು |
| 10 | ಪರಂಧಾಮಯ್ಯ, ಅ.ಕಾ. ಸಿ.ಆ.ಸು.ಇಲಾಖೆ (ಆಡಳಿತ) | 220 ದಿನಗಳು |
| 11 | ಜಗದೀಶ್ ಜೋಯಿಸ್, ಅ.ಕಾ. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | 225 ದಿನಗಳು |
| 12 | ಕೆ.ಸುಧಾಕರ ಶೆಟ್ಟಿ, ಅ.ಕಾ. ಸಿ.ಆ.ಸು.ಇಲಾಖೆ (ಸೇವೆಗಳು–1) | 225 ದಿನಗಳು |
| 13 | ಬಿ.ಎನ್.ಲಕ್ಷ್ಮಿ, ಅ.ಕಾ. ಯೋಜನೆ ಮತ್ತು ಸಾಂಖ್ಯಿಕ ಇಲಾಖೆ | 225 ದಿನಗಳು |
| 14 | ವಿ.ಆರ್.ಗಾಯಕ್‌ವಾಡ್, ಅ.ಕಾ. ಹಾಗೂ ವಿಶೇಷಾಧಿಕಾರಿ ಕೈಗಾರಿಕೆ ಮತ್ತು ಹಣಕಾಸು ಸಚಿವರ ಕಛೇರಿ | 224 ದಿನಗಳು |
| 15 | ಸಗುಣಾಬಾಯಿ, ಅ.ಕಾ. ಸಿ.ಆ.ಸು.ಇಲಾಖೆ (ಜನಸ್ಪಂದನಾ ಕೋಶ) | 224 ದಿನಗಳು |
| 16 | ಹೆಚ್.ಆರ್.ನಾಗೇಂದ್ರ, ಅ.ಕಾ. 5ನೇ ವೇತನ ಆಯೋಗ | 225 ದಿನಗಳು |
| 17 | ಈ.ಎನ್.ಚವ್ಹಾಣ್, ಅ.ಕಾ. ಸಹಾಯಕ ನಿರ್ದೇಶಕರು, ಯೋಜನಾ ಅನುಷ್ಠಾನ ಘಟಕ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು | 225 ದಿನಗಳು |
| 18 | ಕೆ.ನಾರಾಯಣ, ಆಡಳಿತಾಧಿಕಾರಿ, ಶೀ. ಮತ್ತು ಬೆ. ಆಯ್ಕೆ ಪ್ರಾಧಿಕಾರ | 213 ದಿನಗಳು |
| 19 | ಜಿ.ನಾಗರಾಜು, ಅ.ಕಾ. ಸಿ.ಆ.ಸು.ಇಲಾಖೆ (ಸೇವಾ ನಿಯಮ) | 225 ದಿನಗಳು |
| 20 | ಎಸ್.ನಾಗರಾಜು, ಅ.ಕಾ. ಅ.ಪ.ಜೀ.ಪ.ಇಲಾಖೆ | 225 ದಿನಗಳು |
| 21 | ಫೈರೋಜಾ ಖಾನಂ, ಜಂಟಿ ಮುಖ್ಯ ಚುನಾವಣಾಧಿಕಾರಿ ಹಾಗೂ ಪ.ನಿ.ಸ.ಉ.ಕಾ. | 221 ದಿನಗಳು |
| 22 | ಎಲ್.ಎನ್.ಸಾಲುಂಕೆ, ಅ.ಕಾ. ಕಂದಾಯ ಇಲಾಖೆ | 225 ದಿನಗಳು |
| 23 | ಹೆಚ್.ಕೆ.ರವಿಮೂರ್ತಿ, ಅ.ಕಾ. ಸಿ.ಆ.ಸು.ಇಲಾಖೆ (ಕಾರ್ಯಕಾರಿ–1) | 220 ದಿನಗಳು |
| 24 | ಗೋಪಾಲ್, ಆಡಳಿತಾಧಿಕಾರಿ ಹಾಗೂ ಪ.ನಿ.ಸ.ಅ.ಕಾ. ಸಾರ್ವಜನಿಕ ಉದ್ದಿಮೆಗಳ ಇಲಾಖೆ | 225 ದಿನಗಳು |
| 25 | ಎಸ್.ವಿ.ಸತ್ಯನಾರಾಯಣಮೂರ್ತಿ, ಅ.ಕಾ. ಮಾ.ತಂ. ಜೈ.ತಂ. ಮತ್ತು ವಿ.ತಂ.ಇಲಾಖೆ | 225 ದಿನಗಳು |
| 26 | ಸಿ.ಸರೋಜ, ಅ.ಕಾ. ಆರ್ಥಿಕ ಮತ್ತು ಕಾರ್ಮಿಕ ಇಲಾಖೆ (ಕಾ.ಕೋ) | 225 ದಿನಗಳು |
| 27 | ಎಂ.ವೆಂಕಟರಸಪ್ಪ, ಅ.ಕಾ. ಲೋಕೋಪಯೋಗಿ ಇಲಾಖೆ | 225 ದಿನಗಳು |
| 28 | ಫರೂಕ್ ಅಹ್ಮದ್ ಎ.ಶೇಖ್, ಉ.ಕಾ. ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ | 225 ದಿನಗಳು |
| 29 | ರೇವಣ್ಣಗೌಡ, ವಿಶೇಷಾಧಿಕಾರಿ ಸುವರ್ಣ ಕರ್ನಾಟಕ, ಕ. ಮತ್ತು ಸಂ.ಇಲಾಖೆ | 225 ದಿನಗಳು |
| 30 | ಎಸ್.ಅಂಬಾಜಿರಾವ್, ಜಂ.ನಿ. ಯೋಜನಾ ಇಲಾಖೆ | 225 ದಿನಗಳು |

| ಕ್ರಮ ಸಂಖ್ಯೆ | ಅಧಿಕಾರಿಯವರ ಹೆಸರು ಹುದ್ದೆ ಮತ್ತು ಪದನಾಮ **ಶ್ರೀ : ಶ್ರೀಮತಿ** | ನಗದೀಕರಣ ಮಂಜೂರಾದ ನಂತರ ಖಾತೆಯಲ್ಲಿ ಜಮೆ ಇರುವ ಗಳಿಕೆ ರಜೆ |
|---|---|---|
| 31 | ಎಸ್.ಕೆ.ಪುರುಷೋತ್ತಮ, ಅ.ಕಾ.<br>ಕಂದಾಯ ಇಲಾಖೆ | 225 ದಿನಗಳು |
| 32 | ಎಸ್.ನಾರಾಯಣಪ್ಪ, ಅ.ಕಾ.<br>ವಾ.ಪ್ರ. ಮತ್ತು ಯು.ಸೇ.ಇಲಾಖೆ | 225 ದಿನಗಳು |
| 33 | ಟಿ.ಪಿ.ನರಸಿಂಗರಾವ್, ಅ.ಕಾ.<br>ಕಾರ್ಮಿಕ ಇಲಾಖೆ | 221 ದಿನಗಳು |
| 34 | ಎಸ್.ಸಿ.ಸುಂದರ, ಅ.ಕಾ.<br>ಗ್ರಾ.ಅ. ಮತ್ತು ಪಂ.ರಾ.ಇಲಾಖೆ | 225 ದಿನಗಳು |
| 35 | ಕೆ.ರೆಹಮತ್ ಉಲ್ಲಾ, ಅ.ಕಾ.<br>ಸಮಾಜ ಕಲ್ಯಾಣ ಇಲಾಖೆ (ವಕ್ಫ್ ಮತ್ತು ಹಜ್) | 222 ದಿನಗಳು |
| 36 | ಡಿ.ಪಿ.ಮುರುಡಿ, ಅ.ಕಾ.<br>ಆರ್ಥಿಕ ಇಲಾಖೆ | 223 ದಿನಗಳು |
| 37 | ಉಪೇಂದ್ರ ಆರ್. ರಾಯ್ಕರ್, ಆ.ಕಾ.ಗ್ರೇ-2<br>ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆ | 225 ದಿನಗಳು |
| 38 | ಪಿ.ಸುಬ್ಬಲಕ್ಷಮ್ಮ, ಆ.ಕಾ.ಗ್ರೇ-2<br>ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) | 223 ದಿನಗಳು |
| 39 | ವಿಜಯ ಬಿ.ರಾಯ್ಕರ್, ಆ.ಕಾ.ಗ್ರೇ-2<br>ನಗರಾಭಿವೃದ್ಧಿ ಇಲಾಖೆ | 225 ದಿನಗಳು |
| 40 | ಹೆಚ್.ಎಸ್.ವೆಂಕಟೇಶಯ್ಯ, ನಿರ್ದೇಶಕರು<br>ಸಚಿವಾಲಯ ತರಬೇತಿ ಸಂಸ್ಥೆ | 225 ದಿನಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 64

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಶಿಕ್ಷಣ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಇಡಿ 292 ಯುಪಿಸಿ 2004, ಬೆಂಗಳೂರು, ದಿನಾಂಕ: 02ನೇ ಜನವರಿ 2006**

ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-1ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳು ಖಾಸಗಿ ಅನುದಾನಿತ ಪದವಿ ಕಾಲೇಜುಗಳಿಂದ ಇನ್ನು ಪೂರ್ಣವಾಗಿ ಬೇರ್ಪಡಿಸಲ್ಪಟ್ಟಿಲ್ಲವಾದ್ದರಿಂದ ಮತ್ತು ಈ ಅರೆಕಾಲಿಕ ಉಪನ್ಯಾಸಕರಿಗೆ ಸಂಬಂಧಿಸಿದ ಕಾಲೇಜಿನಲ್ಲಿ ಅಗತ್ಯ ಕಾರ್ಯಭಾರ/ಮಂಜೂರಾದ ಖಾಲಿ ಹುದ್ದೆ ಇಲ್ಲದಿರುವ ಪ್ರಯುಕ್ತ ಅವರು ಇತರೆ ಆಡಳಿತ ಮಂಡಳಿಗಳಿಂದ ಸೇವಾ ವಿಲೀನತೆಗೆ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಿರುವುದರಿಂದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003 ಮತ್ತು ಇದಕ್ಕೆ ಮುಂದುವರೆದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ನಿರಾಕ್ಷೇಪಣಾ ಪತ್ರ ನೀಡಿದ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000-11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

2. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-2ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳು ಖಾಸಗಿ ಅನುದಾನಿತ ಪದವಿ ಕಾಲೇಜುಗಳಿಂದ ಇನ್ನು ಪೂರ್ಣವಾಗಿ ಬೇರ್ಪಡಿಸಲ್ಪಟ್ಟಿಲ್ಲವಾದ್ದರಿಂದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003 ಮತ್ತು ಇದಕ್ಕೆ ಮುಂದುವರೆದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು

ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸಂಬಂಧಿಸಿದ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000–11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

3. ಈ ಆದೇಶದಲ್ಲಿ ಕಾಣಿಸಿರುವ ಸೇವಾ ಜೇಷ್ಠತೆಯಲ್ಲಿ ನ್ಯೂನತೆಗಳು ಕಂಡು ಬಂದಲ್ಲಿ ಸರಿಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

4. ಈ ಅರೆಕಾಲಿಕ ಉಪನ್ಯಾಸಕರುಗಳು ಈ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಆಯಾಯ ಕಾಲೇಜುಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 292 ಯುಪಿಸಿ 2004 ದಿನಾಂಕ: 02–01–2006ರ ಅನುಬಂಧ–1**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಅದೇ ಕಾಲೇಜಿನಲ್ಲಿ ಕಾರ್ಯಭಾರವಿಲ್ಲದ ಪ್ರಯುಕ್ತ **ಬೇರೊಂದು ಪದವಿ ಪೂರ್ವ ಕಾಲೇಜುಗಳಿಂದ ನಿರಾಕ್ಷೇಪಣಾ ಪತ್ರ ಸಲ್ಲಿಸಿರುವ ಅಭ್ಯರ್ಥಿಗಳನ್ನು ರಾಜ್ಯ ವೇತನ ಶ್ರೇಣಿ ರೂ.6000–11200ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ

| ಕ್ರ ಸಂ | ಕಾಲೇಜು / ಆಡಳಿತ ಮಂಡಳಿ ಹೆಸರು | ಬೇರೆ ಆಡಳಿತ ಮಂಡಳಿಗಳಿಂದ/ ಕಾಲೇಜುಗಳಿಂದ ನಿರಾಕ್ಷೇಪಣಾ ಪತ್ರ ತಂದಿರುವ ಕಾಲೇಜಿನ ಹೆಸರು | ಅಭ್ಯರ್ಥಿಯ ಹೆಸರು ಶ್ರೀ / ಶ್ರೀಮತಿ | ಬೋಧಿ ಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸ ಲಾತಿ |
|---|---|---|---|---|---|---|
| 1. | ಎಸ್.ವಿ.ಎಸ್. ಕಾಲೇಜು, ಬಂಟ್ವಾಳ | ಸೆಂಟ್ ಆಗ್ನೇಸ್ ಕಾಲೇಜು, ಮಂಗಳೂರು | ಉದಯಕುಮಾರ್ ಪಿ. | ಹಿಂದಿ | 07–08–1968 | ಸಾಮಾನ್ಯ |
| 2. | ವಿವೇಕಾನಂದ ಕಾಲೇಜು, ಪುತ್ತೂರು | ಕ್ಯಾಥೋಲಿಕ್ ಸಂಸ್ಥೆ, ಮಂಗಳೂರು | ವಾಸುದೇವಾ ಎನ್. | ಅರ್ಥಶಾಸ್ತ್ರ | 20–03–1970 | 3–ಎ |
| 3. | ಎಸ್.ಟಿ.ಜೆ. ಕಾಲೇಜು, ಚಿಕ್ಕಮಗಳೂರು | ಕೆ.ಎಲ್.ಇ. ಸಂಸ್ಥೆ, ಬೆಳಗಾಂ | ನಾಗೇಶ್ ವೈ.ಎನ್. | ಸಮಾಜ ಶಾಸ್ತ್ರ | 20–07–1964 | ಸಾಮಾನ್ಯ |
| 4. | ಭಾರತಿ ಕಾಲೇಜು, ಭಾರತಿ ನಗರ, ಮಂಡ್ಯ | ಎಸ್.ಎಲ್.ಎನ್. ಕಾಲೇಜು, ಬೆಂಗಳೂರು | ವೆಂಕಟಪ್ಪ | ಕನ್ನಡ | 24–09–1961 | 3–ಎ |
| 5. | ಭಾರತಿ ಕಾಲೇಜು, ಭಾರತಿ ನಗರ, ಮಂಡ್ಯ | ರೂರಲ್ ಕಾಲೇಜು, ಕನಕಪುರ | ತಮ್ಮಣ್ಣಗೌಡ | ವಾಣಿಜ್ಯ ಶಾಸ್ತ್ರ | 24–05–1965 | 3–ಎ |
| 6. | ರೂರಲ್ ಕಾಲೇಜು, ಕನಕಪುರ | ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ್ | ಶಿವಕುಮಾರ್ ಎಸ್.ಜೆ. | ಅರ್ಥಶಾಸ್ತ್ರ | 23–07–1965 | 2–ಎ |
| 7. | ಎ.ವಿ.ಕೆ. ಕಾಲೇಜು, ಹಾಸನ | ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ್ | ರವಿಕುಮಾರ್ ಡಿ. | ರಾಜ್ಯಶಾಸ್ತ್ರ | 01–01–1962 | ಸಾಮಾನ್ಯ |
| 8. | ವಿ.ವಿ.ಪುರಂ ಕಲಾ ಮತ್ತು ವಾಣಿಜ್ಯ ಕಾಲೇಜು, ಬೆಂಗಳೂರು | ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ್ | ಸ್ವಾಮಿ ಎಂ. | ಆಂಗ್ಲಭಾಷೆ | 25–11–1968 | 3–ಎ |

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 292 ಯುಪಿಸಿ 2004 ದಿನಾಂಕ: 02-01-2006ರ ಅನುಬಂಧ-2**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993-94 ಹಾಗೂ 1994-95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಕಾರ್ಯಭಾರವಿರುವ ಸಂಬಂಧಿಸಿದ ಪದವಿ ಪೂರ್ವ ಕಾಲೇಜುಗಳಲ್ಲಿ **ರಾಜ್ಯ ವೇತನ ಶ್ರೇಣಿ ರೂ.6000-11200ರಲ್ಲಿ** ಸೇವಾ ಸಕ್ರಮಾತಿಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ

| ಕ್ರ ಸಂ | ಕಾಲೇಜು / ಆಡಳಿತ ಮಂಡಳಿ ಹೆಸರು | ಅಭ್ಯರ್ಥಿಯ ಹೆಸರು ಶ್ರೀ / ಶ್ರೀಮತಿ | ಬೋಧಿಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸಲಾತಿ |
|---|---|---|---|---|---|
| 1. | ಸಿದ್ದಗಂಗಾ ಮಹಿಳಾ ಕಾಲೇಜು, ತುಮಕೂರು | ದಕ್ಷಿಣ ಮೂರ್ತಿ ಕೆ. | ರಸಾಯನಶಾಸ್ತ್ರ | 04-07-1966 | 3-ಎ |
| 2. | ಕಿಟಲ್ ಕಲಾ ಕಾಲೇಜು, ಧಾರವಾಡ | ಸುರೇಶ ನ್ಯಾಮತಿ | ಅರ್ಥಶಾಸ್ತ್ರ | 18-04-1967 | ಸಾಮಾನ್ಯ |

**ಮೇರಿ ಜಾಯ್ಸ್**

ಪಿ.ಆರ್. 65 ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ

## ಶಿಕ್ಷಣ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಇಡಿ 272 ಡಿಪಿಐ 2005, ಬೆಂಗಳೂರು, ದಿನಾಂಕ: 04ನೇ ಜನವರಿ 2006**

ಸಾರ್ವಜನಿಕ ಶಿಕ್ಷಣ ಇಲಾಖೆಯ ಈ ಕೆಳಕಂಡ ಮುಖ್ಯ ಶಿಕ್ಷಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳಿಗೆ ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರನ್ವಯ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ವತಂತ್ರ ಪ್ರಭಾರದಲ್ಲಿರಿಸಿ ಅವರುಗಳ ಹೆಸರಿನ ಮುಂದೆ ಸೂಚಿಸಲಾಗಿರುವ ಹುದ್ದೆ ಮತ್ತು ಸ್ಥಳಗಳಿಗೆ ನಿಯುಕ್ತಿಗೊಳಿಸಿ ಆದೇಶಿಸಿದೆ.

ಸದರಿ ಅಧಿಕಾರಿಗಳು ನಿಗಧಿತ ಅವಧಿಯ ಒಳಗಾಗಿ ಕರ್ತವ್ಯದಿಂದ ಬಿಡುಗಡೆಗೊಂಡು ಸ್ಥಳ ನೇಮಕಾತಿ ನೀಡಿರುವ ಸ್ಥಳಗಳಲ್ಲಿ ಕೂಡಲೇ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದ್ದಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ ನಿಯಮ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳನ್ವಯ ಶಿಸ್ತುಕ್ರಮಕ್ಕೆ ಒಳಪಡಿಸಲಾಗುವುದು.

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ / ಶ್ರೀಮತಿ | ಸ್ವತಂತ್ರ ಪ್ರಭಾರದಲ್ಲಿರಿಸಿ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 1. | ಡಿ.ಎಂ.ರಾಜಲಕ್ಷ್ಮಿ, ವಿಷಯ ಪರಿವೀಕ್ಷಕರು, ಉ.ನಿ ಕಛೇರಿ, ಸಾ.ಶಿ.ಇ, ಮೈಸೂರು. | ಹಿರಿಯ ಉಪನ್ಯಾಸಕರು, ಡಯಟ್, ಕೂಡಿಗೆ, ಕೊಡಗು ಜಿಲ್ಲೆ |
| 2. | ಎ.ಚಂದ್ರಶೇಖರ ಬಾಬು, ಸಹಾಯಕ ನಿರ್ದೇಶಕರು, ಅಕ್ಷರ ದಾಸೋಹ, ಚಿಂತಾಮಣಿ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ. | ಉಪನ್ಯಾಸಕರು, ಸಿ.ಟಿ.ಇ, ಬೆಳಗಾಂ |
| 3. | ಎಸ್.ಬಿ.ಚಟ್ಟರಕಿ, ವಿಷಯ ಪರಿವೀಕ್ಷಕರು, ಉ.ನಿ ಕಛೇರಿ, ಬಿಜಾಪುರ | ಹಿರಿಯ ಉಪನ್ಯಾಸಕರು, ಡಯಟ್, ಬಿಜಾಪುರ |
| 4. | ಕೆ.ಎಲ್.ಮಂಜುಳ, ವಿಷಯ ಪರಿವೀಕ್ಷಕರು, ಉ.ನಿ ಕಛೇರಿ, ದ.ಕ.ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಉಡುಪಿ |
| 5. | ಪಿ.ಲಿಂಗಪ್ಪ, ಸಹಾಯಕ ನಿರ್ದೇಶಕರು, ಎಂ.ಎಂಎಸ್. ಸೊರಬ, ಶಿವಮೊಗ್ಗ ಜಿಲ್ಲೆ | ಶಿಕ್ಷಣಾಧಿಕಾರಿ, ಉ.ನಿ. ಕಛೇರಿ, ಸಾ.ಶಿ.ಇ ಬೆಳಗಾವಿ (ಶ್ರೀ.ಜಗನ್ನಾಥ್‌ರವರ ಸ್ಥಳಕ್ಕೆ) |
| 6. | ಹೆಚ್.ಟಿ.ಮಂಜುನಾಥ, ಮು.ಶಿ, ಸ.ಪ್ರೌ.ಶಾ, ಅಂಕನಹಳ್ಳಿ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಚಿತ್ರದುರ್ಗ |
| 7. | ವೆಂಕಟೇಶಯ್ಯ, ಬಿ.ಆರ್.ಸಿ, ಎಸ್.ಎಸ್.ಎ, ಬೆಂಗಳೂರು ದಕ್ಷಿಣ ವಲಯ-1 | ಹಿರಿಯ ಉಪನ್ಯಾಸಕರು, ಡಯಟ್, ದಾವಣಗೆರೆ |
| 8. | ಲತಾ ಮೋಹನದಾಸ್ ನಾಯ್ಕ, ಮು.ಶಿ, ಸ.ಪ್ರೌ.ಶಾ, ತಿರವಾಡ, ಕಾರವಾರ, ಉ.ಕ.ಜಿಲ್ಲೆ | ಶಿಕ್ಷಣಾಧಿಕಾರಿ (ಅಕ್ಷರ ದಾಸೋಹ) ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ |
| 9. | ರಂಗಸ್ವಾಮಿ, ಮು.ಶಿ, ಸ.ಪ್ರೌ.ಶಾ, ದೊಡ್ಡೇರಿ, ಬೆಂಗಳೂರು ದಕ್ಷಿಣ ವಲಯ-1 | ಹಿರಿಯ ಉಪನ್ಯಾಸಕರು, ಡಯಟ್, ಇಳಕಲ್, ಬಾಗಲಕೋಟೆ ಜಿಲ್ಲೆ |
| 10. | ಡಿ.ದೊಡ್ಡರಂಗಪ್ಪ, ಮು.ಶಿ, ಸ.ಪ್ರೌ.ಶಾ, ಶಿವನಹಳ್ಳಿ, ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಜಿಲ್ಲಾ ಯೋಜನಾ ಉಪ ಸಮನ್ವಯಾಧಿಕಾರಿ, ಸರ್ವ ಶಿಕ್ಷಣ ಅಭಿಯಾನ, ಗುಲ್ಬರ್ಗಾ |
| 11. | ಪಿ.ಸತೀಶ್, ಮು.ಶಿ, ಸ.ಪ್ರೌ.ಶಾ (ಎಸ್.ಎಸ್.ಬಿ) ಹೇರಳಕಟ್ಟೆ, ಮಂಗಳೂರು | ಹಿರಿಯ ಉಪನ್ಯಾಸಕರು, ಡಯಟ್, ಉಡುಪಿ |
| 12. | ಶ್ಯಾಮಲ ತಿಮ್ಮಣ್ಣ ನಾಯ್ಕ, ಮು.ಶಿ, ಸ.ಪ್ರೌ.ಶಾ, ನಾಡುಮಸ್ಕೇರಿ, ಕುಮುಟ, ಉ.ಕ. ಜಿಲ್ಲೆ | ಶಿಕ್ಷಣಾಧಿಕಾರಿ, ಉ.ನಿ ಕಛೇರಿ, ಸಾ.ಶಿ.ಇ, ಕಾರವಾರ ಉ.ಕ. ಜಿಲ್ಲೆ |

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ / ಶ್ರೀಮತಿ | ಸ್ವತಂತ್ರ ಪ್ರಭಾರದಲ್ಲಿರಿಸಿ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 13. | ವಿ.ಜಿ.ಪೋಳ್, ವಿಷಯ ಪರಿವೀಕ್ಷಕರು, ಉ.ನಿ.ಕಛೇರಿ, ಸಾ.ಶಿ.ಇ, ಬೆಳಗಾಂ | ಹಿರಿಯ ಉಪನ್ಯಾಸಕರು, ಡಯಟ್, ಬೆಳಗಾವಿ |
| 14. | ವಿಠಲ ರಾಮನಾಯ್ಕ, ವಿಷಯ ಪರಿವೀಕ್ಷಕರು, ಉ.ನಿ ಕಛೇರಿ, ಸಾ.ಶಿ.ಇ, ಕಾರವಾರ | ಹಿರಿಯ ಉಪನ್ಯಾಸಕರು, ಡಯಟ್, ಕುಮುಟ |
| 15. | ಕೆ.ಎಂ.ಇಂದಿರಮ್ಮ, ಮು.ಶಿ. ಸ.ಪ್ರೌ.ಶಾ, ಎನ್.ಆರ್ ಮೊಹಲ್ಲಾ, ಮೈಸೂರು | ಶಿಕ್ಷಣಾಧಿಕಾರಿ (ಅಕ್ಷರ ದಾಸೋಹ) ಜಿಲ್ಲಾ ಪಂಚಾಯತ್, ಹಾಸನ (ಶ್ರೀ.ಕೃಷ್ಣ ಶೆಟ್ಟಿಯವರ ಬಡ್ತಿಯಿಂದ ತೆರವಾಗುವ ಹುದ್ದೆಗೆ) |
| 16. | ಎಲ್.ಸಿದ್ದಲಿಂಗಪ್ಪ, ಉಪನ್ಯಾಸಕರು, ಡಯಟ್, ತುಮಕೂರು | ಹಿರಿಯ ಉಪನ್ಯಾಸಕರು, ಡಯಟ್, ಕೊಪ್ಪಳ |
| 17. | ಸಿ.ರಘುನಾಥರೆಡ್ಡಿ, ಉಪ ಪ್ರಾಂಶುಪಾಲರು, ಸಪಪೂಕಾ, ಚಿಕ್ಕಬಳ್ಳಾಪುರ | ಹಿರಿಯ ಉಪನ್ಯಾಸಕರು, ಡಯಟ್, ದಾವಣಗೆರೆ (ಶ್ರೀ.ಪಿ.ಎಲ್.ಶಾರದಮ್ಮ ರವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ) |
| 18. | ಸಿ.ಬಿ.ಸರಸ್ವತಿ, ಉಪನ್ಯಾಸಕರು, ಡಯಟ್, ಶಿವಮೊಗ್ಗ | ಹಿರಿಯ ಉಪನ್ಯಾಸಕರು, ಡಯಟ್, ಶಿವಮೊಗ್ಗ (ಶ್ರೀ.ರಾಮಚಂದ್ರ ಇವರ ಬಡ್ತಿಯಿಂದ ತೆರವಾಗುವ ಹುದ್ದೆಗೆ) |
| 19. | ಹಸ್ಮ ಮಹಾದೀನ್ ಖಾನ್, ಮು.ಶಿ. ಸ.ಪ್ರೌ.ಶಾ, ಹುನಗುಂದ, ಶಿಗ್ಗಾಂವ ತಾ, ಹಾವೇರಿ ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಹಾವೇರಿ |
| 20. | ಎಸ್.ಎ.ಮಲ್ಲೇಶ್ವರಿ, ವಿಷಯ ಪರಿವೀಕ್ಷಕರು, ಉ.ನಿ. ಕಛೇರಿ, ಮೈಸೂರು | ಪ್ರಾಂಶುಪಾಲರು, ಸರ್ಕಾರಿ ಹಿಂದಿ ಶಿಕ್ಷಕ ತರಬೇತಿ ಸಂಸ್ಥೆ, ವಸಂತಮಹಲ್, ಮೈಸೂರು (ಶ್ರೀ.ಮಹಮದ್ ಬಷೀರ್, ಇವರ ಬಡ್ತಿಯಿಂದ ತೆರವಾಗುವ ಹುದ್ದೆಗೆ) |
| 21. | ಜಿ.ಪಿ.ಲಿಂಗರಾಜು, ಉಪನ್ಯಾಸಕರು, ಡಯಟ್, ಮಂಡ್ಯ | ಹಿರಿಯ ಉಪನ್ಯಾಸಕರು, ಡಯಟ್, ಗದಗ |
| 22. | ಬಿ.ಬೈಯಪ್ಪ, ಮು.ಶಿ. ಸ.ಪ್ರೌ.ಶಾ, ಬೂದಗುಂಪ, ಕೊಪ್ಪಳ ಜಿಲ್ಲೆ | ಉಪನ್ಯಾಸಕರು, ಸಿ.ಟಿ.ಇ, ಗುಲ್ಬರ್ಗಾ |
| 23. | ಯಮರಾಜ ನಾಯ್ಕ, ಸಹಾಯಕ ನಿರ್ದೇಶಕರು, ಎಂ.ಎಂ.ಎಸ್. ತಾಲ್ಲೂಕು ಪಂಚಾಯತ್, ಜಗಳೂರು, ದಾವಣಗೆರೆ ಜಿಲ್ಲೆ | ಉಪನ್ಯಾಸಕರು, ಸಿ.ಟಿ.ಇ, ಜಮಖಂಡಿ, ಬಾಗಲಕೋಟೆ ಜಿಲ್ಲೆ (ಸುಭದ್ರ ರವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ) |
| 24. | ಇಮಾಮ್ ಎಫ್ ಮ್ಯಾಗಿ, ಉಪನ್ಯಾಸಕರು, ಡಯಟ್, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು (ಶ್ರೀಮತಿ.ಯಾಸ್ಮಿನ್ ಇವರ ಬಡ್ತಿಯಿಂದ ತೆರವಾಗುವ ಹುದ್ದೆಗೆ) |
| 25. | ಬಿ.ಹೆಚ್.ಶಕುಂತಲಾ, ವಿಷಯ ಪರಿವೀಕ್ಷಕರು, ಉ.ನಿ. ಕಛೇರಿ, ಚಿತ್ರದುರ್ಗ. | ಹಿರಿಯ ಉಪನ್ಯಾಸಕರು, ಡಯಟ್, ಚಿತ್ರದುರ್ಗ |
| 26. | ಜಯದೇವ ಮಾರೋಳ, ಸಹಾಯಕ ಯೋಜನಾ ಸಮನ್ವಯಾಧಿಕಾರಿ (ಎಪಿಸಿ) ಎಸ್.ಎಸ್.ಎ ಬಾಗಲಕೋಟೆ | ಹಿರಿಯ ಉಪನ್ಯಾಸಕರು, ಡಯಟ್, ಬಿಜಾಪುರ |
| 27. | ಎಸ್.ಮೌನೇಶ್, ಸಹಾಯಕ ನಿರ್ದೇಶಕರು, ಅಕ್ಷರ ದಾಸೋಹ ಕಾರ್ಯಕ್ರಮ, ಗಂಗಾವತಿ, ಕೊಪ್ಪಳ ಜಿಲ್ಲೆ | ಕ್ಷೇತ್ರ ಶಿಕ್ಷಣಾಧಿಕಾರಿ, ಸೇಡಂ, ಗುಲ್ಬರ್ಗಾ ಜಿಲ್ಲೆ (ಶ್ರೀ. ಸಗರೆ ಇವರ ಬಡ್ತಿಯಿಂದ ತೆರವಾಗುವ ಹುದ್ದೆಗೆ) |
| 28. | ಮುನಿರಾಜು, ಮು.ಶಿ, ಸ.ಪ್ರೌ.ಶಾ, ಗೋರಗುಂಟೆಪಾಳ್ಯ, ಬೆಂಗಳೂರು | ಹಿರಿಯ ಉಪನ್ಯಾಸಕರು, ಡಯಟ್, ಗದಗ |
| 29. | ಪಿ.ಹಾಲಾನಾಯಕ್, ಬಿ.ಆರ್.ಸಿ ಸಮನ್ವಯಾಧಿಕಾರಿ ಎಸ್.ಎಸ್.ಎ ಶಿವಮೊಗ್ಗ | ಉಪನ್ಯಾಸಕರು, ಸಿ.ಟಿ.ಇ, ಜಮಖಂಡಿ |
| 30. | ದೊಡ್ಡಪ್ಪ ಹೊಸಮನಿ, ವಿಷಯ ಪರಿವೀಕ್ಷಕರು, ಉ.ನಿ ಕಛೇರಿ, ಯಾದಗಿರಿ, ಗುಲ್ಬರ್ಗಾ ಜಿಲ್ಲೆ | ಉಪನ್ಯಾಸಕರು, ಸಿ.ಟಿ.ಇ, ಜಮಖಂಡಿ |
| 31. | ಎಸ್.ಜಿ.ನಾಗೇಶ್, ಮು.ಶಿ, ಸ.ಪ್ರೌ.ಶಾ. ಹಳೇಪಾಳ್ಯ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ | ಶಿಕ್ಷಣಾಧಿಕಾರಿ (ಅಕ್ಷರ ದಾಸೋಹ) ಜಿಲ್ಲಾ ಪಂಚಾಯತ್, ದಾವಣಗೆರೆ |
| 32. | ಭುವನೇಶ್ವರವೆಂಕಟರಾಮಯ್ಯ, ಪ್ರಾಂಶುಪಾಲರು, ಮೊರಾರ್ಜಿ ದೇಸಾಯಿ ವಸತಿ ಶಾಲೆ, ಸಿರ್ಸಿ, ಉ.ಕ. ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಹಾವೇರಿ |

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ **ಶ್ರೀ / ಶ್ರೀಮತಿ** | ಸ್ವತಂತ್ರ ಪ್ರಭಾರದಲ್ಲಿರಿಸಿ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 33. | ಹೆಚ್.ಸಿ.ಹನುಮಂತರಾಯ, ಮು.ಶಿ, ಸ.ಪ್ರೌ.ಶಾ, ಬ್ಯಾತ, ತುಮಕೂರು ತಾ / ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಕಮಲಾಪುರ ಗುಲ್ಬರ್ಗಾ ಜಿಲ್ಲೆ (ಶ್ರೀ.ನಾರಾಯಣ ರವರ ವರ್ಗಾವಣೆಯಿಂದ ತೆರವಾಗುವ ಹುದ್ದೆಗೆ) |
| 34. | ಚಂದ್ರಕಾಂತ ತಿಮ್ಮಣ್ಣ ನಾಯ್ಕ, ಮು.ಶಿ. ಸ.ಪ್ರೌ.ಶಾ, ಬೆಳ್ಕಿ, ಭಟ್ಕಳ, ಉ.ಕ.ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಕುಮುಟ |
| 35. | ದಾನಪ್ಪ ಸಜ್ಜನ, ಉಪನ್ಯಾಸಕರು, ಡಯಟ್, ರಾಯಚೂರು | ಹಿರಿಯ ಉಪನ್ಯಾಸಕರು, ಡಯಟ್, ಕಮಲಾಪುರ ಗುಲ್ಬರ್ಗಾ ಜಿಲ್ಲೆ (ಶ್ರೀ.ಕಾಶೀನಾಥ್ ರವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ) |
| 36. | ಎಸ್.ಎಂ.ರಾಮು, ಉಪನ್ಯಾಸಕರು, ಡಯಟ್, ಮಂಡ್ಯ | ಹಿರಿಯ ಉಪನ್ಯಾಸಕರು, ಡಯಟ್, ಮಂಗಳೂರು, ದ.ಕ. ಜಿಲ್ಲೆ |
| 37. | ಉದಯಕುಮಾರ್.ಎನ್ ಬೆಟ್ಟದೂರು, ಮು.ಶಿ, ಸ.ಪ್ರೌ.ಶಾ,ಯರಗೇರಾ, ಕುಷ್ಠಗಿ.ತಾ ಕೊಪ್ಪಳ.ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಕೊಪ್ಪಳ |
| 38. | ಭರತರಾಜ್ ಎಸ್ ಸಾವಳಗಿ, ಉಪನ್ಯಾಸಕರು, ಡಯಟ್, ಕಮಲಾಪುರ, ಗುಲ್ಬರ್ಗಾ ಜಿಲ್ಲೆ | ಕ್ಷೇತ್ರ ಶಿಕ್ಷಣಾಧಿಕಾರಿ, ಆಳಂದ, ಗುಲ್ಬರ್ಗಾ ಜಿಲ್ಲೆ (ಶ್ರೀ.ರಾಮಲಿಂಗಪ್ಪ ರವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ) |
| 39. | ಕೆಂಪರಾಮು, ಬಿ.ಆರ್.ಸಿ ಸಮನ್ವಯಾಧಿಕಾರಿ, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ–1, ಬೆಂಗಳೂರು ಉತ್ತರ ಜಿಲ್ಲೆ | ನಂತರ ಸ್ಥಳ ನಿಯುಕ್ತಿ ನೀಡಲಾಗುವುದು. |
| 40. | ಸಿದ್ದಗಂಗಯ್ಯ, ಮು.ಶಿ, ಸ.ಪ್ರೌ.ಶಾ, ಗಂಗಸಾಗರ, ಪಾವಗಡ ತಾ, ಮಧುಗಿರಿ, ತುಮಕೂರು ಉತ್ತರ | ಜಿಲ್ಲಾ ಯೋಜನಾ ಉಪ ಸಮನ್ವಯಾಧಿಕಾರಿ, ಸರ್ವ ಶಿಕ್ಷಣ ಅಭಿಯಾನ, ರಾಯಚೂರು, (ಶ್ರೀ.ರೇಖ್ಯಾ ನಾಯಕ್ ರವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ) |
| 41. | ಇಂದಿರಾ ರಂಗಣ್ಣ, ಸಹಾಯಕ ಯೋಜನಾ ಸಮನ್ವಯಾಧಿಕಾರಿ, ಎಸ್.ಎಸ್.ಎ ರಾಯಚೂರು | ಹಿರಿಯ ಉಪನ್ಯಾಸಕರು, ಡಯಟ್, ಯರಮಾರಸ್, ರಾಯಚೂರು ಜಿಲ್ಲೆ (ಶ್ರೀ.ನಾಗರಾಜ ಗೌಡ ರವರ ಜಾಗಕ್ಕೆ) |

ಭಾಗ–2

ಸಾರ್ವಜನಿಕ ಶಿಕ್ಷಣ ಇಲಾಖೆಯ ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಅಧಿಕಾರಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಹುದ್ದೆ ಮತ್ತು ಸ್ಥಳಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಿದೆ.

ಸದರಿ ಅಧಿಕಾರಿಗಳು ತಕ್ಷಣ ಕರ್ತವ್ಯದಿಂದ ಬಿಡುಗಡೆಗೊಂಡು ವರ್ಗಾಯಿಸಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಿ ಸರ್ಕಾರವನ್ನು ಒಳಗೊಂಡಂತೆ ಸಂಬಂಧಪಟ್ಟವರೆಲ್ಲರಿಗೂ ವರದಿ ಸಲ್ಲಿಸತಕ್ಕದ್ದು. ಹಾಗೂ ಸದರಿ ಕ್ರಮ ಸಂಖ್ಯೆಯಲ್ಲಿನ ಕ್ರಮಸಂಖ್ಯೆ 5ರಲ್ಲಿರುವ ಅಧಿಕಾರಿಯನ್ನು ಹೊರತುಪಡಿಸಿ ಉಳಿದ ಕ್ರಮಸಂಖ್ಯೆ 1, 2, 3, 4, 6 ಇವರುಗಳಿಗೆ ವರ್ಗಾವಣೆ ಭತ್ಯೆ ಮತ್ತು ಇನ್ನಿತರೆ ಭತ್ಯೆಗಳಿಗೆ ಅರ್ಹರಿರುವುದಿಲ್ಲ.

| | | |
|---|---|---|
| 1. | ಬಸವರಾಜ ಎನ್. ಮಯಾಚಾರ್ಯ, ಶಿಕ್ಷಣಾಧಿಕಾರಿ, ಉ.ನಿ ಕಛೇರಿ, ಕಾರವಾರ | ಕ್ಷೇತ್ರ ಶಿಕ್ಷಣಾಧಿಕಾರಿ, ಜೊಯಿಡಾ, ಉತ್ತರ ಕನ್ನಡ ಜಿಲ್ಲೆ (ಖಾಲಿ ಹುದ್ದೆ) |
| 2. | ಟಿ.ಎಲ್. ಶಾರದಮ್ಮ, ಹಿರಿಯ ಉಪನ್ಯಾಸಕರು, ಡಯಟ್, ದಾವಣಗೆರೆ | ಹಿರಿಯ ಸಹಾಯಕ ನಿರ್ದೇಶಕರು, (ಪ್ರಾ.ಶಿ) ಆಯುಕ್ತರ ಕಛೇರಿ, ಬೆಂಗಳೂರು (ಶ್ರೀ.ಕೆಂಪಯ್ಯನವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ) |
| 3. | ಕೆಂಪಯ್ಯ, ಹಿರಿಯ ಸಹಾಯಕ ನಿರ್ದೇಶಕರು, (ಪ್ರಾ.ಶಿ) ಆಯುಕ್ತರ ಕಛೇರಿ, ಬೆಂಗಳೂರು | ಕ್ಷೇತ್ರ ಶಿಕ್ಷಣಾಧಿಕಾರಿ, ದಕ್ಷಿಣ ವಲಯ–2 ಬೆಂಗಳೂರು ದಕ್ಷಿಣ ಜಿಲ್ಲೆ (ಶ್ರೀಮತಿ.ಯಶೋದ ಬೋಪಣ್ಣ ರವರ ಬಡ್ತಿಯಿಂದ ತೆರವಾಗುವ ಹುದ್ದೆ) |
| 4. | ರಾಮಕೃಷ್ಣ ಕುಲಕರ್ಣಿ, (ಸ್ಥಳ ನೇಮಕಾತಿ ನಿರೀಕ್ಷೆಯಲ್ಲಿರುವ) | ಹಿರಿಯ ಉಪನ್ಯಾಸಕರು, ಡಯಟ್, ಕಮಲಾಪುರ, ಗುಲ್ಬರ್ಗಾ ಜಿಲ್ಲೆ (ನಾಗೇಶ್ ಶಾನಬೋಗ ರವರ ಜಾಗಕ್ಕೆ) |
| 5. | ರಾಮಲಿಂಗಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ಆಳಂದ, ಗುಲ್ಬರ್ಗಾ ಜಿಲ್ಲೆ | ಹಿರಿಯ ಉಪನ್ಯಾಸಕರು, ಡಯಟ್, ಬೀದರ್ (ಸಾ.ಹಿ.ದೃ) |
| 6. | ನಾಗರಾಜ ಗೌಡ, ಹಿರಿಯ ಉಪನ್ಯಾಸಕರು, ಡಯಟ್, ಯರಮಾರಸ್, ರಾಯಚೂರು ಜಿಲ್ಲೆ | ಕ್ಷೇತ್ರ ಶಿಕ್ಷಣಾಧಿಕಾರಿ, ದೇವದುರ್ಗ, ರಾಯಚೂರು ಜಿಲ್ಲೆ (ಖಾಲಿ ಹುದ್ದೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸ್ವರ್ಣಲತಾ. ಎಂ. ಭಂಡಾರೆ,**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇವೆಗಳು–1,2)

ಪಿ.ಆರ್. 87

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ, ಧಾರವಾಡ

### ಅಧಿಸೂಚನೆ

**ನಂ:ಜಿಸಕ:ಸಿಬ್ಬಂದಿ-4:ಸಿಆರ್-26:2005-06, ದಿನಾಂಕ: 29ನೇ ಡಿಸೆಂಬರ್ 2005**

**ವಿಷಯ:** ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರದ ಅಧಿನಿಯಮ 22ರ) ಜಾರಿಗೆ ತರುವ ಕುರಿತು.

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು.**

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (ಕೇಂದ್ರದ ಅಧಿನಿಯಮ 22ರ 2005) ರನ್ವಯ ಸೆಕ್ಷನ್ 5(1), 5(2) ಮತ್ತು 19(1) ರಲ್ಲಿ ಸೂಚನೆಯಂತೆ ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯನ್ನು "ಸಾರ್ವಜನಿಕ ಪ್ರಾಧಿಕಾರ" ವೆಂದು ಹಾಗೂ ಸದರ ಕಛೇರಿಗೆ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಮೇಲ್ಮನವಿ ಪ್ರಾಧಿಕಾರಿ" ಗಳನ್ನು ನೇಮಕ ಮಾಡಿ ಅಧಿಸೂಚನೆ ಹೊರಡಿಸಬೇಕಾಗಿದೆ.

ಅದರಂತೆ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯವು ಮಾನ್ಯ ಜಿಲ್ಲಾಧಿಕಾರಿಗಳು, ಧಾರವಾಡ ಇವರ ಕಛೇರಿ ಆವರಣದಲ್ಲಿ ನೆಲೆಗೊಂಡಿದೆ. ಧಾರವಾಡ ಜಿಲ್ಲೆಯ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಧಾರವಾಡ ಜಿಲ್ಲೆಯ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತಾರೆ. ಶ್ರೀ ಕೆ.ಎಸ್. ಉಮಾಪತಿ, ಕೆ.ಎ.ಎಸ್. ಇವರು ಧಾರವಾಡ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಡಾ॥ ಎಂ. ಮಾರ್ತಾಂಡಪ್ಪ ಇವರು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದು ಇವರಿಗೆ ಸಹಾಯಕರಾಗಿ ಈ ಕೆಳಗಿನಂತೆ ಸಿಬ್ಬಂದಿ ವರ್ಗ ಕಾರ್ಯನಿರ್ವಹಿಸುತ್ತಿದೆ.

| | | |
|---|---|---|
| 1. | ಕಛೇರಿ ಅಧೀಕ್ಷಕರು | 01 ಹುದ್ದೆ |
| 2. | ವಿಶೇಷ ಘಟಕ ಯೋಜನೆ ಅಧೀಕ್ಷಕರು | 01 ಹುದ್ದೆ |
| 3. | ಪ್ರಥಮ ದರ್ಜೆ ಸಹಾಯಕರು | 03 ಹುದ್ದೆ |
| 4. | ದ್ವಿತೀಯ ದರ್ಜೆ ಸಹಾಯಕರು | 01 ಹುದ್ದೆ |
| 5. | ಬೆರಳಚ್ಚುಗಾರರು | 01 ಹುದ್ದೆ |
| 6. | ವಾಹನ ಚಾಲಕರು | 01 ಹುದ್ದೆ |
| 7. | ಗ್ರೂಪ್-ಡಿ ನೌಕರರು | 02 ಹುದ್ದೆ |

ಈ ಕಛೇರಿಯ ಅಧೀನದಲ್ಲಿ ಬರುವ ಸಂಸ್ಥೆಗಳ ವಿವರ ಈ ಕೆಳಗಿನಂತೆ ಇರುತ್ತದೆ.

1) ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಧಾರವಾಡ, ಹುಬ್ಬಳ್ಳಿ, ಕಲಘಟಗಿ, ನವಲಗುಂದ, ಹಾಗೂ ಕುಂದಗೋಳ.

2) ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆ, ಹುಬ್ಬಳ್ಳಿ, ತಾ॥ ಧಾರವಾಡ.

ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಮೆಟ್ರಿಕ್ ನಂತರದ ವಸತಿ ನಿಲಯಗಳು, ಮೆಟ್ರಿಕ್ ಪೂರ್ವ ವಸತಿ ನಿಲಯಗಳು ಹಾಗೂ ಮಹಿಳಾ ಕಲ್ಯಾಣ ಕೇಂದ್ರಗಳು, ಪರಿಶಿಷ್ಟ ಜಾತಿ ಹೊಲಿಗೆ ತರಬೇತಿ ಕೇಂದ್ರಗಳು ಹಾಗೂ ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ.

ಇದು ಅಲ್ಲದೇ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಮತ್ತು ತಾಲ್ಲೂಕಾ ಮಟ್ಟದಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ದಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ತಾಲ್ಲೂಕಾ ಮಟ್ಟದಲ್ಲಿ ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಸಹಾಯಕರಾಗಿ ಕಛೇರಿ ಅಧೀಕ್ಷಕರು ಹಾಗೂ ಇತರೇ ಸಿಬ್ಬಂದಿ ವರ್ಗ ಇರುತ್ತದೆ.

1. ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಧನಸಹಾಯ.
2. ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಪ್ರೋತ್ಸಾಹಧನ.
3. ಭಾರತ ಸರಕಾರದ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಹಾಗೂ ಹೆಚ್ಚುವರಿ ಊಟ ವಸತಿ ವೆಚ್ಚ.
4. ಪುಸ್ತಕ ಭಂಡಾರ.
5. ಪ್ರತಿಭಾ ವಿದ್ಯಾರ್ಥಿ ವೇತನ.
6. ಸ್ವಯಂ ಉದ್ಯೋಗಕ್ಕೆ ತರಬೇತಿ, ಕಂಪ್ಯೂಟರ್ ತರಬೇತಿ, ವಾಹನ ಚಾಲನೆ ತರಬೇತಿ, ಹೊಲಿಗೆ ತರಬೇತಿ ಹಾಗೂ ಹೊಲಿಗೆ ಯಂತ್ರಗಳ ಪೂರೈಕೆ, ನರ್ಸಿಂಗ್ ಕೋರ್ಸ್ ಹಾಗೂ ವೃತ್ತಿ ತರಬೇತಿ ಇತ್ಯಾದಿ ಕೋರ್ಸುಗಳಲ್ಲಿ ತರಬೇತಿ.
7. ಕಾನೂನು ಪದವಿಧರರಿಗೆ ಶಿಷ್ಯವೇತನ ಹಾಗೂ ಸ್ಪೋಕನ್ ಇಂಗ್ಲೀಷ್ ತರಬೇತಿ.
8. ವಿಶೇಷ ಘಟಕ ಯೋಜನೆಯಡಿ ಧನಸಹಾಯ.
9. ಅಂತರ ಜಾತಿ ವಿವಾಹಿತರಿಗೆ ಪ್ರೋತ್ಸಾಹಧನ.
10. ಸವರ್ಣೀಯರಿಂದ ದೌರ್ಜನ್ಯಕ್ಕೆ ಒಳಗಾದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದವರಿಗೆ ಪರಿಹಾರಧನ.
11. ಸ್ವಯಂ ಸೇವಾ ಸಂಸ್ಥೆಗಳಿಗೆ ವಿದ್ಯಾರ್ಥಿನಿಲಯ ನಿರ್ಮಾಣಕ್ಕಾಗಿ ಸಹಾಯಧನ.
12. ಮಿನಿ ಅಂಬೇಡ್ಕರ್ ಭವನ.
13. ಪರಿಶಿಷ್ಟ ಜಾತಿ /ಪರಿಶಿಷ್ಟ ವರ್ಗದವರಿಗಾಗಿ ಆಶ್ರಯ ಹಾಗೂ ಅಂಬೇಡ್ಕರ್ ಮನೆಗಳ ನಿರ್ಮಾಣದ ಉಸ್ತುವಾರಿ.

**2) ಅಧಿಕಾರಿಗಳ ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.**

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಜಿಲ್ಲಾ ಮಟ್ಟದಲ್ಲಿ ಎಲ್ಲಾ ವಿಭಾಗಗಳ ಹಾಗೂ ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಧಾರವಾಡ ಜಿಲ್ಲೆಯಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:-**

**1. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು:**

1) ಧಾರವಾಡ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಹಾಗೂ ಧಾರವಾಡ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸಹಾಯಕರಾಗಿ ಕಾರ್ಯನಿರ್ವಹಿಸುವುದು.

2) ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಜನರ ಕಲ್ಯಾಣ ಕಾರ್ಯಕ್ರಮಗಳ ಕುರಿತು ಜಿಲ್ಲೆಯ ಎಲ್ಲಾ ಇಲಾಖೆಯ ಮುಖ್ಯಸ್ಥರೊಂದಿಗೆ ಸಹಕರಿಸುವುದು.

3) ಕರಡು ಯೋಜನೆ ತಯಾರಿಸುವುದು.

4) ತಿಂಗಳಲ್ಲಿ 15 ದಿವಸಗಳು ಪ್ರವಾಸ ಕೈಗೊಂಡು, ಇಲಾಖೆಯ ಎಲ್ಲಾ ಸಂಸ್ಥೆಗಳ ಪ್ರಗತಿ ಪರಿಶೀಲನೆ ಕುರಿತು ಕನಿಷ್ಠ 10 ದಿವಸ ವಾಸ್ತವ್ಯ ಮಾಡುವುದು.

**ಹೆಚ್ಚುವರಿ ಕರ್ತವ್ಯಗಳು:**

1) ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಜನರ ಮೇಲೆ ನಡೆಯುವ ದೌರ್ಜನ್ಯ ಹಾಗೂ ಅಸ್ಪೃಶ್ಯತೆ ಕುರಿತು ಜಿಲ್ಲೆಯ ಪೊಲೀಸ್ ಇಲಾಖೆಯನ್ನು ಸಂಪರ್ಕಿಸಿ ಮಾಹಿತಿ ಪಡೆದು ಸೂಕ್ತ ಕ್ರಮ ಜರುಗಿಸುವುದು.

2) ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗಳನ್ನು ಇಲಾಖೆಯ ಸಂಸ್ಥೆಗಳನ್ನು ಹಾಗೂ ವಿಷಯ ನಿರ್ವಾಹಕರ ಮೇಜು ತಪಾಸಣಾ ಕಾರ್ಯ.

3) ಶಿಕ್ಷಣ ಹಾಗೂ ಇತರೆ ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗದವರ ಮೀಸಲಾತಿ ಹಾಗೂ ಶೈಕ್ಷಣಿಕ ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ಪ್ರವೇಶ ಕುರಿತು ಮೀಸಲಾತಿ ನಿಯಮ ಅನುಸರಿಸುವ ಬಗ್ಗೆ ತಪಾಸಣೆ ನಡೆಸಿ ಸೂಕ್ತ ನಿರ್ದೇಶನ ನೀಡುವುದು.

4) ಬೆಂಗಳೂರಿನಲ್ಲಿ ಜರುಗುವ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಗೆ ಹಾಗೂ ಜಿಲ್ಲಾ ಮಟ್ಟದಲ್ಲಿ ಜರುಗುವ ಪ್ರಗತಿ ಪರಿಶೀಲನಾ ಸಭೆಗೆ ಹಾಜರಾಗುವುದು ಹಾಗೂ ಮಾಹಿತಿ ಸಲ್ಲಿಸುವುದು.

5) ಪ್ರತಿ ತಿಂಗಳು ಅನುದಾನ ಹಾಗೂ ಖರ್ಚುಗಳ ತಃಖ್ತೆ ತಯಾರಿಸಿ ಸಲ್ಲಿಸುವುದು.

6) ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ಜನರ ದೂರು ಹಾಗೂ ಸಮಸ್ಯೆಗಳನ್ನು ಪರಿಹರಿಸಲು ಪ್ರಮಾಣಿಕ ಪ್ರಯತ್ನ ಮಾಡುವುದು.

7) ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ನೀಡಿದ ಶಿಷ್ಯವೇತನ ವಿತರಣೆಯನ್ನು ಜಿಲ್ಲೆಯ ಶಾಲೆ, ಕಾಲೇಜುಗಳಿಗೆ ಭೇಟಿ ನೀಡಿ ಪರಿಶೀಲಿಸುವುದು.

8) ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯಡಿ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗದ ಜನರಿಗೆ ನೀಡಿದ ಸ್ವತ್ತುಗಳ ಪರಿಶೀಲನೆ ಇತ್ಯಾದಿ.

**3) ಕಛೇರಿಯ ಸಿಬ್ಬಂದಿಯ ಕರ್ತವ್ಯ ನಿರ್ವಹಣೆ ವಿವರಗಳು:-**

ಕಛೇರಿಯ ಸಿಬ್ಬಂದಿ ವರ್ಗದವರು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ವ್ಯಾಪ್ತಿಯಲ್ಲಿ ಹಾಗೂ ತಾಲ್ಲೂಕ ಮಟ್ಟದಲ್ಲಿ ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವರು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಪಡೆದ ನಂತರ ಸದರಿ ಪತ್ರಗಳನ್ನು ನೊಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಿ ಸ್ವೀಕೃತಿ ರುಜು ಪಡೆಯಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿ ಪ್ರಕಾರ ಕಡತವನ್ನು ಪ್ರಾರಂಭಿಸಿ ಸೂಕ್ತ ಕ್ರಮ ಕೈಗೊಂಡು ಅಧಿಕಾರಿಗಳ ಅನುಮೋದನೆಗಾಗಿ ಕಡತವನ್ನು ಮಂಡಿಸುವರು.

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸುವ ಗುಣಮಟ್ಟಗಳು:-**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.

2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆಗಾಗಿ ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳ ಮಾಸಿಕ ಸಭೆ ಏರ್ಪಡಿಸಲಾಗುವುದು.

3) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ತರಬೇತಿ ಕಾರ್ಯಾಗಾರ ನಡೆಸುವುದು.

4) ಇಲಾಖಾ ಸಂಸ್ಥೆಗಳ ತಪಾಸಣಾ ಹಾಗೂ ವಿಷಯ ನಿರ್ವಾಹಕರ ಮೇಜು ತಪಾಸಣಾ ಕಾರ್ಯ.

5) ಸಾರ್ವಜನಿಕರ ಕುಂದುಕೊರತೆಗಳ ನಿವಾರಣೆಗಾಗಿ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ, ಕ್ರಿಯಾ ಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.

2) ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳನ್ನು ನೇಮಕ ಮಾಡುವುದು.

### 2005ರ ಮಾಹಿತಿ ಹಕ್ಕು ಕಾಯ್ದೆ

2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ನಂ:22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಧಾರವಾಡ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗೆ ಸಂಬಂಧಿಸಿದಂತೆ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಧಾರವಾಡ ಇವರನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಅಧಿನಿಯಮ ಸೆಕ್ಷನ್ 5(2) ರ ಅಡಿಯಲ್ಲಿ ಧಾರವಾಡ ಜಿಲ್ಲೆಯ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಕಛೇರಿ ಅಧೀಕ್ಷಕರು, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ, ಧಾರವಾಡ ಇವರನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಲಾಗಿದೆ.

2005ರ ಮಾಹಿತಿ ಹಕ್ಕು ಕಾಯ್ದೆ 19(1)ರ ಅಡಿಯಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರನ್ನು ಸದರಿ ಅಧಿನಿಯಮದಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

ಪಿ.ಆರ್. 92 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಧಾರವಾಡ

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಜಯನಗರ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 608/2003, ದಿನಾಂಕ: 8ನೇ ಡಿಸೆಂಬರ್ 2003**

**ಉಪಸ್ಥಿತರು: ಬಿ.ಎಂ. ಪರಮೇಶ್ವರ, ಭಾ.ಅ.ಸೇ.**

**ಫಿರ್ಯಾದಿ** : ಶ್ರೀ ಎಂ. ನಂಜಪ್ಪ,
ಸಹಾಯಕ ಆರಕ್ಷಕ ಉಪ-ನಿರೀಕ್ಷಕರು,
ಸಂಜಯನಗರ ಪೊಲೀಸ್ ಸ್ಟೇಷನ್, ಬೆಂಗಳೂರು-94

**ವಿರುದ್ಧ**

**ಅರ್ಜಿದಾರ** : ಶ್ರೀಮತಿ ಅಬಿದಬೀ
ಕೋಂ ಅಬ್ದುಲ್ ರಷೀದ್,
ನಂ.3, ನಲಬಂದವಾಡಿ, ಪೊಲೀಸ್ ರಸ್ತೆ, ರಾಣಾಸಿಂಗ್‌ಪೇಟೆ, ಬೆಂಗಳೂರು-53.

**ಆರೋಪಿಗಳು** : 1) ಮುನಾವರ್ ಬಿನ್ ಅಜೀಜ್ ಉಲ್ಲಾ
2) ಇರ್‌ಷಾದ್ ಅಹಮ್ಮದ್ ಬಿನ್ ಅಬ್ದುಲ್‌ರೇಹಮಾನ್
3) ಕೃಷ್ಣಪ್ಪ ಬಿನ್ ದಾಸಪ್ಪ

1) **ಪ್ರಕರಣದ ಮುಖ್ಯಾಂಶಗಳು:** ದಿನಾಂಕ:7/8.12.2003 ರಂದು ಬೆಳಗಿನ ಜಾವ 3.30 ಗಂಟೆ ಸುಮಾರಿಗೆ ತಲುಪಿದ ಖಚಿತ ವರ್ತಮಾನದ ಮೇರೆಗೆ ಫಿರ್ಯಾದಿ ಶ್ರೀ ಎಂ. ನಂಜಪ್ಪ, ಸಹಾಯಕ ಉಪ-ನಿರೀಕ್ಷಕರು, ಸಂಜಯನಗರ ಪೊಲೀಸ್ ಸ್ಟೇಷನ್‌ರವರು KEB ಲೇ-ಔಟ್, ಮುನಿರಾಮಪ್ಪ ಗಾರ್ಡನ್ ಹತ್ತಿರ ಆರೋಪಿಗಳು ಯಾವುದೇ ರಹದಾರಿ ಪತ್ರ ಹೊಂದದೆ ಅಕ್ರಮವಾಗಿ ಶ್ರೀಗಂಧದ ತುಂಡುಗಳನ್ನು ಅರ್ಜಿದಾರಳ ಆಟೋ ರಿಕ್ಷಾ ವಾಹನ ನೋಂದಣಿ ಸಂಖ್ಯೆ:KA-02-9531 ನೇದ್ದರಲ್ಲಿ ಸಾಗಿಸುತ್ತಿದ್ದನ್ನು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಬಂದು ಅದನ್ನು ಖಚಿತಪಡಿಸಿಕೊಂಡು ಶ್ರೀಗಂಧದ ಮರದ ತುಂಡುಗಳನ್ನು ಹಾಗೂ ವಾಹನವನ್ನು ಅಮಾನತ್ತುಪಡಿಸಿಕೊಂಡ ಕಾರಣ ಪ್ರಸ್ತುತ ಮೊಕದ್ದಮೆಯನ್ನು ನೋಂದಾಯಿಸಿಕೊಂಡದ್ದು ಇರುತ್ತದೆ.

2) ಪ್ರಾಧಿಕಾರಕ್ಕೆ ಶ್ರೀಗಂಧದ ಮರದ ತುಂಡುಗಳು ವಾಹನ ಹಾಗೂ ಪ್ರಕರಣದ ಕಾಗದ ಪತ್ರಗಳ ನಕಲುಗಳು ತಲುಪಿದ ನಂತರ ಪ್ರಾಧಿಕಾರವು ಈ ಬಗ್ಗೆ ದಿನಾಂಕ: 19.1.2004 ರಂದು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71(ಬಿ) ಕೆಳಗೆ ಕಾರಣ ಕೇಳುವ ನೋಟೀಸನ್ನು ಅರ್ಜಿದಾರಳಿಗೆ ನೀಡಿರುತ್ತದೆ. ಇದಕ್ಕೆ ಮುಂಚಿತವಾಗಿ ಪ್ರಾಧಿಕಾರಕ್ಕೆ ದಿನಾಂಕ: 7.1.2004 ರಂದು ಅರ್ಜಿದಾರನು ತನ್ನ ನ್ಯಾಯವಾದಿಗಳ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀಗಂಧದ ಮರದ ತುಂಡುಗಳ ಅಕ್ರಮ ಸಾಗಾಣಿಕೆಗೆ ಹಾಗೂ ತನ್ನ ವಾಹನಕ್ಕೆ ಯಾವುದೇ ಸಂಬಂಧವಿರದ್ದರಿಂದ ಮುಟ್ಟುಗೋಲು ಮೊಕದ್ದಮೆಯನ್ನು ಕೈಬಿಟ್ಟು ತನ್ನ ವಾಹನವನ್ನು ಆತನ ಸುಪರ್ದಿಗೆ ನೀಡಬೇಕು ಅಂತ ವಿನಂತಿಸಿದ್ದು ಇದೆ. ಅದೇ ರೀತಿ ಪ್ರಕರಣದ ವಿಚಾರಣೆಯಾಗುವವರೆಗೆ ವಾಹನವನ್ನು ತನ್ನ ಮಧ್ಯಂತರ ವಶಕ್ಕೆ ನೀಡಲು ಕೂಡ ವಿನಂತಿಸಿದ್ದು ಇರುತ್ತದೆ. ಸದರಿ ಅರ್ಜಿಗೆ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ: 15.5.2004 ರಂದು ತಮ್ಮ ತಕರಾರುಗಳನ್ನು ಸಲ್ಲಿಸಿದ್ದು ಇರುತ್ತದೆ.

3) ಪ್ರಾಧಿಕಾರವು ಮುಟ್ಟುಗೋಲು ಪ್ರಕರಣದ ವಿಚಾರಣೆ ಕುರಿತು ಫಿರ್ಯಾಧಿಗೆ, ಮಹಜರ್ ಸಾಕ್ಷಿಗಳಿಗೆ ಅರ್ಜಿದಾರನಿಗೆ ಹಾಗೂ ಅವರ ನ್ಯಾಯವಾದಿಗಳಿಗೆ ಮತ್ತು A.D.P. ಯವರಿಗೆ ಅನೇಕ ಬಾರಿ ಸಮನ್ಸ್‌ಗಳು/ ನೋಟೀಸ್‌ಗಳನ್ನು ನೀಡಿ ವಿವಿಧ ದಿನಾಂಕಗಳನ್ನು ನಿಗದಿಪಡಿಸಿದ್ದು ಇರುತ್ತದೆ.

4) ಈ ಬಗ್ಗೆ ಅಭಿಯೋಜನವು ತನ್ನ ಪರವಾಗಿ ಎರಡು ಸಾಕ್ಷಿಗಳನ್ನು ವಿಚಾರಣೆ ಮಾಡಲಾಗಿದೆ. ಫಿರ್ಯಾದಿ-ಪೊಲೀಸ್ ಅಧಿಕಾರಿ ಪ್ರಾ.ಸಾ-1 ಸ್ವತಃ ಪ್ರಕರಣ ದಾಖಲಿಸಿದ ತನಿಖಾ ಅಧಿಕಾರಿ ಇದ್ದು ಸದರಿ ಸಾಕ್ಷಿಯಿಂದ 10 ದಾಖಲಾತಿಗಳನ್ನು ನಿಶಾನೆಗಳನ್ನಾಗಿ ಗುರುತಿಸಲಾಗಿರುತ್ತದೆ. ಪ್ರಾಸಾ-2 ಮತ್ತೊರ್ವ ತನಿಖಾಧಿಕಾರಿಯಿದ್ದು ಸದರಿ ಸಾಕ್ಷಿಯಿಂದ ನಿಶಾನೆ ಪಿ-11 ಮತ್ತು ನಿಶಾನೆ ಪಿ-12ನ್ನು ಗುರುತಿಸಲಾಗಿರುತ್ತದೆ. ಅಲ್ಲದೆ ಅರ್ಜಿದಾರಳ ಪರವಾಗಿ ಅರ್ಜಿದಾರಳು ಸೇರಿದಂತೆ 2 ಸಾಕ್ಷಿಗಳನ್ನು ವಿಚಾರಣೆ ಮಾಡಲಾಗಿರುತ್ತದೆ. ಈ ಬಗ್ಗೆ ಉಭಯತರ ವಾದ-ವಿವಾದಗಳನ್ನು ಕೇಳಲಾಗಿರುತ್ತದೆ. ಈ ಮೇಲೆ ಹೇಳಿದಂತೆ ಅರ್ಜಿದಾರಳ ವಾಹನದಲ್ಲಿ ಅಕ್ರಮ ಶ್ರೀಗಂಧದ ಸಾಗಾಣಿಕೆಯನ್ನು ಮಾಡಲಾಗಿರುತ್ತದೆಯೇ ಎಂಬ ಬಗ್ಗೆ ಅಭಿಯೋಜನೆ ಪರ ಸಾಕ್ಷಿದಾರರುಗಳು ಇಲ್ಲ ಹಾಗೂ ನಿಶಾನೆಗಳನ್ನಾಗಿ ಗುರುತಿಸಲ್ಪಟ್ಟಿರುವ ದಾಖಲಾತಿಗಳಿಂದ ಸಂಶಯಾತೀತವಾಗಿ ಸಾಬೀತುಪಡಿಸಲಾಗಿರುತ್ತದೆಯೇ ಮತ್ತು ಆ ರೀತಿ ಸಾಬೀತು ಪಡಿಸಲಾಗಿರದಿದ್ದಲ್ಲಿ ವಾಹನವನ್ನು ಹಾಗೂ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೋ ಹೇಗೆ? ಅಥವಾ ಶ್ರೀಗಂಧವನ್ನು ಮಾತ್ರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೋ ಹೇಗೆ ಎಂಬ ಅಂಶಗಳನ್ನು ನಾನು ಇದರಲ್ಲಿ ಇತ್ಯರ್ಥಪಡಿಸಬೇಕಾಗಿರುತ್ತದೆ.

5) ಪ್ರಾ.ಸಾ-1 ಫಿರ್ಯಾದಿ-ಪೊಲೀಸ್ ಅಧಿಕಾರಿ ಸದರಿಯವರ ಸಾಕ್ಷ್ಯ ಮತ್ತು ನಿಶಾನೆ P-1 ರಿಂದ P-10ನೇ ದಾಖಲಾತಿಗಳನ್ವಯ ದಿನಾಂಕ:7.11.2003 ರಂದು KEB ಲೇ-ಔಟ್ 1ನೇ ಮುಖ್ಯ ರಸ್ತೆಯಲ್ಲಿ ಅರ್ಜಿದಾರಳ ವಾಹನದಲ್ಲಿ ಶ್ರೀಗಂಧ ಕಳ್ಳ ಸಾಗಾಣಿಕೆ ಮಾಡಲು ಪ್ರಯತ್ನಿಸುತ್ತಿದ್ದಾಗ ಅದನ್ನು ತಾವು ಪತ್ತೆ ಹಚ್ಚಿ ಪ್ರಸ್ತುತ ಮೊಕದ್ದಮೆಯನ್ನು ನೋಂದಾಯಿಸಿಕೊಂಡಿರುವುದಾಗಿ ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯನ್ನು ಅರ್ಜಿದಾರಳ ನ್ಯಾಯವಾದಿಗಳು ವಿವರವಾಗಿ ಪಾಟೀ ಸವಾಲು ಮಾಡಿರುತ್ತಾರೆ. ತನಿಖಾಧಿಕಾರಿಯು ಪ್ರಕರಣದ ಮುಂದಿನ ತನಿಖೆಯನ್ನು ಸದರಿ ಪೊಲೀಸ್ ಠಾಣೆಯ ಮತ್ತೊರ್ವ ಆರಕ್ಷಕ ಉಪ ನಿರೀಕ್ಷಕರು ಆಗಿದ್ದ ಶ್ರೀಮತಿ ರಾಧ

ಎಂಬುವವರಿಗೆ ವಹಿಸಿದ್ದು, ಸದರಿ ತನಿಖಾಧಿಕಾರಿಯನ್ನು ಸಾಕ್ಷಿಯನ್ನಾಗಿ ಹೆಸರಿಸಿಲ್ಲದ ಕಾರಣ ಸದರಿ ತನಿಖಾಧಿಕಾರಿಯನ್ನು ಸಾಕ್ಷಿಯನ್ನಾಗಿ ಕರೆಸಿ ಪ್ರಾ.ಸಾ-2 ಎಂದು ವಿಚಾರ ಮಾಡಲಾಗಿದೆ. ಸದರಿ ಸಾಕ್ಷಿಯಿಂದ ನಿಶಾನೆ P-11 ಮತ್ತು P-12 ನ್ನು ಗುರುತಿಸಲಾಗಿರುತ್ತದೆ. ಪ್ರಕರಣದಲ್ಲಿಯ ಮಹಜರ್ ಸಾಕ್ಷಿಗಳಾದ ಚಾ.ಸಾ. 1 ಮತ್ತು 2 ರಲ್ಲಿ ಪ್ರಾಧಿಕಾರವು ಅನೇಕ ಬಾರಿ ಸಮನ್ಸ್‌ಗಳನ್ನು/ ನೋಟೀಸ್‌ಗಳನ್ನು R.P.A.D. ಮೂಲಕ ಕಳುಹಿಸಿದ್ದು ಅವುಗಳು ಸದರಿಯವರಿಗೆ ಜಾರಿಯಾಗದೆ ವಿಳಾಸದಲ್ಲಿ ಇರುವುದಿಲ್ಲ ಅಂತ ಅಂಚೆ ಇಲಾಖೆಯ ಷರಾಗಳೊಂದಿಗೆ ಹಿಂದಿರುಗಿಸಲ್ಪಟ್ಟಿರುತ್ತದೆ.

6) ಪ್ರಸ್ತುತ ಪ್ರಕರಣದಲ್ಲಿ ಪ್ರಾ.ಸಾ 1 ಮತ್ತು ಪ್ರಾ.ಸಾ-2 ತನಿಖಾಧಿಕಾರಿಗಳಿದ್ದು ಸದರಿ ಸಾಕ್ಷಿಗಳ ಸಾಕ್ಷ್ಯವನ್ನು ಅಮಾನತ್ತು ಮಹಜರ್ ಸಾಕ್ಷಿಗಳು ಬೆಂಬಲಿಸಲು ಪ್ರಾಧಿಕಾರದ ಮುಂದು ಹಾಜರಾಗಿರುವುದಿಲ್ಲ. ಈ ಬಗ್ಗೆ ಅರ್ಜಿದಾರಳು ಹಾಗೂ ಮತ್ತೊರ್ವ ಅರ್ಜಿದಾರಳ ಪರ ಸಾಕ್ಷಿಯ ಸಾಕ್ಷ್ಯವನ್ನು ಪರಿಶೀಲಿಸಿದಾಗ ಘಟನೆಯ ದಿನಾಂಕ, ಸ್ಥಳ ಹಾಗೂ ವೇಳೆಯಂದು ಅರ್ಜಿದಾರಳ ಮೇಲೆ ಹೇಳಿದ ವಾಹನದಲ್ಲಿ ಶ್ರೀಗಂಧದ ಕಡಿದ ಮರದ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿದ್ದರು ಎಂಬ ಆರೋಪದ ಬಗ್ಗೆ ಸಂಶಯ ಉಂಟಾಗುತ್ತದೆ. ಅಲ್ಲದೆ ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರಳು ವಾಹನ ಮಾಲೀಕಳೆ ಹೊರತು ಪ್ರಕರಣದಲ್ಲಿ ಆರೋಪಿತಳಾಗಿರುವುದಿಲ್ಲ. ಹಾಗೂ ಸ್ವತಃ ಆಕೆ ಅಕ್ರಮ ಸಾಗಾಣಿಕೆಯಲ್ಲಿ ಬಾಗಿಯಾಗಿರುವುದರ ಬಗ್ಗೆ ಕೂಡ ಅಭಿಯೋಜನೆ ಪಕ್ಷದವರು ಸಾಕ್ಷಿದಾರರುಗಳೊಂದಿಗೆ ಸಾಬೀತುಪಡಿಸಿರುವುದಿಲ್ಲ. ಅಲ್ಲದೆ ವಾಹನದ ಮಾಲೀಕಳು ತನ್ನ ವಾಹನವನ್ನು ಬೇರೊಂದು ಷೆಡ್‌ನಲ್ಲಿ ನಿಲ್ಲಿಸುತ್ತಿದ್ದೆ ಎಂದು ನುಡಿದಿರುವುದರಿಂದ ಅಕ್ರಮ ಸಾಗಾಣಿಕೆಯಲ್ಲಿ ಈಕೆ ಬಾಗಿಯಾಗಿರುವುದರ ಬಗ್ಗೆ ಸಂಶಯ ಉಂಟಾಗಿರುತ್ತದೆ. ಅರ್ಜಿದಾರಳು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಶ್ರೀಗಂಧವನ್ನು ತನ್ನ ವಶಕ್ಕೆ ಕೇಳದೆ ಇರುವುದರಿಂದ KA-02-9531ರ ವಾಹನದಲ್ಲಿ ಅರ್ಜಿದಾರಳು ಶ್ರೀಗಂಧವನ್ನು ಅಕ್ರಮ ಸಾಗಾಣಿಕೆ ಮಾಡುತ್ತಿದ್ದರು ಎಂಬ ಆಪಾದನೆಯನ್ನು ಅಭಿಯೋಜನೆಯವರು ಸಾಬೀತು ಮಾಡದ ಕಾರಣ ಪ್ರಕರಣದಲ್ಲಿ ಅರ್ಜಿದಾರಳ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳದೆ ಈ ಕೆಳಕಂಡ ಆದೇಶ ಹೊರಡಿಸುತ್ತಿದ್ದೇನೆ.

**ಆದೇಶ**

**ಸಂಖ್ಯೆ: ಎ4-ಎಸ್‌ಓಸಿ-ಸಿಆರ್-8/2003-04, ದಿನಾಂಕ: 21ನೇ ಸೆಪ್ಟೆಂಬರ್ 2005**

ಬಿ.ಎಂ. ಪರಮೇಶ್ವರ ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಆದ ನಾನು ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಾಂಭರಿಸಿದ ನಂತರ ಕರ್ನಾಟಕ ಅರಣ್ಯ ಕಾಯ್ದೆ ಕಲಂ 71(A) ಕೆಳಗೆ ಇರುವ ಅಧಿಕಾರವನ್ನು ಚಲಾಯಿಸಿ ಸಂಜಯನಗರ ಪೊಲೀಸರು ತಮ್ಮ ಮೊಕದ್ದಮೆ ಸಂಖ್ಯೆ: 608/2003ರಲ್ಲಿ ಮಾಲು ಪಟ್ಟಿ ಸಂಖ್ಯೆ 96/2003 ವಶಪಡಿಸಿಕೊಂಡಿರುವ ಶ್ರೀಗಂಧದ ತುಂಡುಗಳನ್ನು ಮಾತ್ರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅರ್ಜಿದಾರಳ ಆಟೋ ರಿಕ್ಷಾ ವಾಹನ ನೊಂದಣಿ ಸಂಖ್ಯೆ: KA-02-9531ನೇದ್ದನ್ನು ಅರ್ಜಿದಾರಳ ವಶಕ್ಕೆ ಅಂತಿಮವಾಗಿ ಬಿಟ್ಟುಕೊಡಲು ಆದೇಶಿಸಿರುತ್ತೇನೆ. ಪ್ರಸ್ತುತವಾಗಿ ಅರ್ಜಿದಾರಳ ವಾಹನವು ಇಲಾಖೆಯ ವಶದಲ್ಲೇ ಇದ್ದು, ಅದನ್ನು ಈ ಕೂಡಲೇ ಆತಳ ಸುಪರ್ದಿಗೆ ಬಿಡಲು ಆದೇಶಿಸಿದ್ದೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 21.9.2005ರಂದು ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಬಿ.ಎಂ. ಪರಮೇಶ್ವರ**

ಪಿ.ಆರ್. 93

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ನಗರ ವಿಭಾಗ, ಬೆಂಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಕಾರ್ಯಾಲಯದ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಎಸ್.ಬಿ. ಮಹೀಂದ್ರಕರ, ಶುಶ್ರೂಷಕಿ, ಜಿಲ್ಲಾ ಆಸ್ಪತ್ರೆ, ಬಿಜಾಪುರ, ಇವರ ಗೈರು ಹಾಜರಿ ಬಗ್ಗೆ ಇಲಾಖೆ ವಿಚಾರಣೆ - ಅಂತಿಮ ಆದೇಶ.

**ಓದಲಾಗಿದೆ:**

1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ:ಡಿಪಿಎನ್(15)ಸಿಆರ್/8/01-02 ದಿನಾಂಕ 9.6.2001.
2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶದ ಸಂಖ್ಯೆ: ಡಿಪಿಎನ್ (15) ಸಿಆರ್/8/01-02, ದಿನಾಂಕ: 17.6.2002.
3. ವಿಚಾರಣಾ ವರದಿಯ ಸಂಖ್ಯೆ: ವಿಅ:ವಿಚಾರಣೆ:ಎನ್.ಜಿ:70/02/03, ದಿನಾಂಕ:21.11.2003
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್ (15) ಸಿಆರ್/8/01-02 ದಿನಾಂಕ: 31.12.2003 ಮತ್ತು ದಿನಾಂಕ: 14.9.2004.

**ಪ್ರಸ್ತಾವನೆ:**

ಶ್ರೀಮತಿ ಎಸ್.ಬಿ. ಮಹೀಂದ್ರಕರ, ಶುಶ್ರೂಷಕಿ, ಇವರು ಈ ಹಿಂದೆ ಜಿಲ್ಲಾ ಆಸ್ಪತ್ರೆ, ಬಿಜಾಪುರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 1.1.1997 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿನ ತಿಳುವಳಿಕೆ ಹಾಗೂ ದೋಷಾರೋಪಣ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸದೇ ಇರುವ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2) ಆದೇಶದಲ್ಲಿ ಮುಖ್ಯ ಜಾಗ್ರತಾಧಿಕಾರಿಗಳು, (ಜಾಗ್ರತ ಕೋಶ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (3) ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದಂತೆ ರೀತ್ಯಾ ಮೇಲೆ ಓದಲಾದ (4) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ನೌಕರರು ಅಹವಾಲನ್ನು ಸಲ್ಲಿಸಿರುವುದಿಲ್ಲ.

ಆದಕಾರಣ, ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶದ ಸಂಖ್ಯೆ: ಡಿಪಿಎನ್ (15): ಸಿಆರ್:08:2001-2002, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುವ ಡಾ: ಎಂ.ಜಿ. ಪ್ರಸಾದ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಆದ ನಾನು ಶ್ರೀಮತಿ ಎಸ್.ಬಿ. ಮಹೀಂದ್ರಕರ, ಶುಶ್ರೂಷಕಿ, ಜಿಲ್ಲಾ ಆಸ್ಪತ್ರೆ, ಬಿಜಾಪುರ ಇವರು ದಿನಾಂಕ: 1.1.1997 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿಯಾದ ಆರೋಪಕ್ಕೆ ತಕ್ಕಂತೆ ದಂಡನೆಯಾಗಿ ಸದರಿ ನಿಯಮ 8(viii) ರ ಪ್ರಕಾರ ಕೂಡಲೇ ಜಾರಿಗೆ ಬರುವಂತೆ ಮತ್ತೆ ನೌಕರರ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದ್ದೇನೆ.

ಆಯುಕ್ತರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 96

ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರಂ ಉಪವಿಭಾಗ, ರಾಮನಗರರವರ ಸಮ್ಮುಖದಲ್ಲಿ

**ವಿಷಯ:** ಶ್ರೀ ನರಸಯ್ಯ ರವರ ಸ್ಥಿರಾಸ್ತಿಯನ್ನು ರಾಮನಗರ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಹೆಸರಿಗಿದ್ದುದ್ದನ್ನು ವರ್ಗಾವಣೆ ಮಾಡುವ ಬಗ್ಗೆ ಕುರಿತು.

**ಉಲ್ಲೇಖ:** 1. ಈ ಕಛೇರಿಯ ಆದೇಶ ಸಂಖ್ಯೆ:ಸಸಸನಿರಾ-ಎಚ್ಎಲ್:54:ಬಿ 2001-02 ದಿನಾಂಕ: 4.10.2002.

**ಪ್ರಸ್ತಾವನೆ:**

ಶ್ರೀ ನರಸಯ್ಯ ಉರುಫ್ ಕೊತ್ತಗಯ್ಯ ಬಿನ್ ಚಿಕ್ಕಹೈದಯ್ಯ, ಮೇದರ ದೊಡ್ಡಿ ಕೃಷ್ಣಾ ಪುರದೊಡ್ಡಿ (ಅಂಚಿ) ಹಾಗೂ ಕುಳ್ಳಮುನಿಯಪ್ಪ ಬಿನ್ ಚಿಕ್ಕಹೈದಯ್ಯ ರವರುಗಳು ರಾಮನಗರಂ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಇಲ್ಲಿ ಪಡೆದಿದ್ದ ಸಾಲಕ್ಕೆ ಸುಸ್ತಿಯಾಗಿದ್ದರ ಮೇರೆಗೆ ಬಾಕಿ ಹಣವನ್ನು ವಸೂಲಿ ಮಾಡಲು ಸಹಕಾರ ಸಂಘಗಳ ಉಪನಿಬಂಧಕರು ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಸಮ್ಮುಖದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ದಾವೆಯನ್ನು ಹೂಡಿ ಈ ದಾವೆಯಲ್ಲಿ ಡಿಕ್ರಿಯನ್ನು ಪಡೆದು ಸುಸ್ತಿ ಮೊತ್ತ ವಸೂಲಾತಿಗಾಗಿ ಈ ಕಛೇರಿಯಲ್ಲಿ ಸಂಖ್ಯೆ:422:98-99 ರಲ್ಲಿ ಅಮಲ್ಜಾರಿ ದಾಖಲು ಮಾಡಿರುತ್ತಾರೆ. ಇದರನ್ವಯ ವಸೂಲಾತಿ ಕ್ರಮ ಜರುಗಿಸಲಾಗಿ ಸುಸ್ತಿದಾರರು ಬ್ಯಾಂಕಿಗೆ ಆಧಾರ ಮಾಡಿದ್ದು ಸ್ಥಿರಾಸ್ತಿಯನ್ನು ದಿನಾಂಕ: 27.4.2001 ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿ ಹರಾಜಿನಲ್ಲಿ ಬಿಡ್ಡುದಾರರು ಬಾರದೇ ಇದ್ದ ಕಾರಣ ಡಿಕ್ರಿ ಬಾಕಿದಾರನ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ಸಹಕಾರ ಸಂಘಗಳ 1960ರ ನಿಯಮಾವಳಿಗಳ ನಿಯಮ 38(ಎ)(3) ರೀತ್ಯ ದಿನಾಂಕ: 4.10.2002 ರಂದು ವರ್ಗಾವಣೆ ಮಾಡಲಾಗಿತ್ತು.

ಕಾರ್ಯದರ್ಶಿ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ರಾಮನಗರ ರವರು ಸಹಕಾರ ಸಂಘಗಳ ನಿಯಮ 38(ಎ) (15) ರಡಿಯಲ್ಲಿ ಅರ್ಜಿ ಸಲ್ಲಿಸಿ ಶ್ರೀ ನರಸಯ್ಯ ಮತ್ತು ಕುಳ್ಳಮುನಿಯಪ್ಪ ರವರಿಂದ ಬಾಕಿ ಇದ್ದ ಸಂಪೂರ್ಣ ಮೊತ್ತವನ್ನು ರಶೀತಿ ಸಂಖ್ಯೆ:4797 ದಿನಾಂಕ: 30.11.2004 ರಲ್ಲಿ ಪಾವತಿಸಿರುವುದರಿಂದ ಸದರಿಯವರುಗಳ ಸ್ಥಿರಾಸ್ತಿ ಸ್ವತ್ತನ್ನು ಬ್ಯಾಂಕಿನ ಹೆಸರಿಗೆ ವರ್ಗಾಯಿಸಿಕೊಂಡಿದ್ದನ್ನು ಪುನಃ ಅವರ ಹೆಸರಿಗೆ ವರ್ಗಾವಣೆ ಮಾಡಲು ಕೋರಿರುತ್ತಾರೆ. ಹಾಗೂ ಬ್ಯಾಂಕಿನಿಂದ ದಿನಾಂಕ: 8.8.2005 ರಂದು ನೀಡಲಾಗಿರುವ ಸಾಲ ತೀರುವಳಿ ದೃಢೀಕರಣ ಪತ್ರವನ್ನು ಸಹ ಹಾಜರುಪಡಿಸಿರುತ್ತಾರೆ.

ನರಸಯ್ಯ ಮತ್ತು ಕುಳ್ಳಮುನಿಯಪ್ಪರವರುಗಳಿಗೆ ಸಂಬಂಧಿಸಿದ ಸ್ಥಿರಾಸ್ಥಿಗಳು ರಾಮನಗರ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾ ಅಭಿವೃದ್ಧಿ ಬ್ಯಾಂಕ್ ನಿಯಮಿತ ಹೆಸರಿಗೆ ವರ್ಗಾವಾಗಿದ್ದನ್ನು ರದ್ದುಪಡಿಸಿ ಪುನಃ ನರಸಯ್ಯ ಮತ್ತು ಕುಳ್ಳಮುನಿಯಪ್ಪ ರವರುಗಳ ಹೆಸರಿಗೆ ವರ್ಗಾಯಿಸುವ ಸಂಬಂಧ ಈ ಕೆಳಕಂಡಂತೆ ಆದೇಶಿಸಲಾಗಿದೆ.

### ಆದೇಶ

**ಸಸಸನಿರಾ-46:ಎಬಿಎನ್:54:01-02, ದಿನಾಂಕ: 7ನೇ ಜನವರಿ 2006**

ಗಂಗಾಧರಪ್ಪ ವಿ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರಂ ಉಪವಿಭಾಗ ರಾಮನಗರ ಆದ ನಾನು ಸಹಕಾರ ಸಂಘಗಳ ಕಾಯ್ದೆ 1959 ಕಲಂ 101(ಜಿ) ಸಹಕಾರ ಸಂಘಗಳ 1960ರ ನಿಯಮಾವಳಿಗಳ ನಿಯಮ 38(ಎ)(15) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001 ರಡಿ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಉಲ್ಲೇಖ (1)ರ ಆದೇಶದಲ್ಲಿ ಶ್ರೀ ನರಸಯ್ಯ ಉರುಫ್ ಕೊತ್ತಗಯ್ಯ ಬಿನ್ ಚಿಕ್ಕಹೈದಯ್ಯ ಮತ್ತು ಕುಳ್ಳಮುನಿಯಪ್ಪ ಬಿನ್ ಚಿಕ್ಕಹೈದಯ್ಯ ಇಬ್ಬರು ಮೇದರದೊಡ್ಡಿ ಕೃಷ್ಣಾಪುರದೊಡ್ಡಿ ಅಂಚಿ ಕೈಲಂಚ ಹೋಬಳಿ ರಾಮನಗರ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆರವರಿಗೆ ಸೇರಲಾಗಿದ್ದ ಸ್ಥಿರಾಸ್ತಿಯ ಸ್ವತ್ತನ್ನು ರಾಮನಗರ ತಾಲ್ಲೂಕು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಇದರ ಹೆಸರಿಗೆ ವರ್ಗಾಯಿಸಿ ಹೊರಡಿಸಲಾಗಿದ್ದ ಆದೇಶವನ್ನು ರದ್ದುಪಡಿಸಿ ಕೆಳಗಿನ ಪಂಕ್ತಿಯಲ್ಲಿ ತಿಳಿಸಲಾಗಿರುವ ಸ್ಥಿರಾಸ್ತಿ ಸ್ವತ್ತನ್ನು ಶ್ರೀ ನರಸಯ್ಯ ಉರುಫ್ ಕೊತ್ತಗಯ್ಯ ಬಿನ್ ಚಿಕ್ಕಹೈದಯ್ಯ ಮತ್ತು ಕುಳ್ಳಮುನಿಯಪ್ಪ ಬಿನ್ ಚಿಕ್ಕಹೈದಯ್ಯ ರವರುಗಳ ಹೆಸರಿಗೆ ವರ್ಗಾವಣೆ ಮಾಡಲು ಆದೇಶ ನೀಡಿರುತ್ತೇನೆ.

ಸಹಕಾರ ಸಂಘಗಳ ಕಾಯ್ದೆಯನ್ವಯ ನಮೂನೆ 4ರ ನಿಗದಿತ ನಮೂನೆಯಲ್ಲಿ ಸ್ಥಿರಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

**ಪರಿಶಿಷ್ಟ**

| ಕ್ರ. ಸಂ. | ಹೆಸರು | ಸರ್ವೆ ನಂ. | ಎಕರೆ ಗುಂಟೆ | ತರಹೆ | ಗ್ರಾಮ |
|---|---|---|---|---|---|
| 1. | ನರಸಯ್ಯ ಉರುಫ್ ಕೊತ್ತಗಯ್ಯ ಬಿನ್ ಚಿಕ್ಕಹೈದಯ್ಯ | 57:1 | 0.20 | ಖುಷ್ಕಿ | ತಮ್ಮನಾಯಕನಹಳ್ಳಿ |
| 2. | ಕುಳ್ಳಮುನಿಯಪ್ಪ ಬಿನ್ ಚಿಕ್ಕಹೈದಯ್ಯ | 19:4 | 3.10 | ಖುಷ್ಕಿ | ತಮ್ಮನಾಯಕನ ಹಳ್ಳಿ |

**ಚಕ್ಕುಬಂದಿ**

ನರಸಯ್ಯ ಉರುಫ್ ಕೊತ್ತಗಯ್ಯ ಸರ್ವೆ ನಂಬರ್ 57:1

ಪೂರ್ವಕ್ಕೆ - ಸ್ವಂತ ಜಮೀನು
ಪಶ್ಚಿಮಕ್ಕೆ - ಸ್ವಂತ ಜಮೀನು
ಉತ್ತರಕ್ಕೆ - ರೋಡ್
ದಕ್ಷಿಣಕ್ಕೆ - ವೆಂಕಟರಾಮಯ್ಯ

ಕುಳ್ಳಮುನಿಯಪ್ಪ ಬಿನ್ ಚಿಕ್ಕಹೈದಯ್ಯ ಸರ್ವೆ ನಂಬರ್ 19:4

**ಚಕ್ಕುಬಂದಿ**

ಪೂರ್ವಕ್ಕೆ - ಹಳ್ಳ

ಪಶ್ಚಿಮಕ್ಕೆ - ಸ್ವಂತ ಜಮೀನು

ಉತ್ತರಕ್ಕೆ - ರೋಡ್

ದಕ್ಷಿಣಕ್ಕೆ - ವೆಂಕಟಯ್ಯ

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿ ಮೊಹರು ನಿಶೆಯೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪವಿಭಾಗ, ರಾಮನಗರಂ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರಂ ಉಪವಿಭಾಗ, ರಾಮನಗರಂ**

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960ರ ನಿಯಮ 38ಎ (15)ನ್ನು ನೋಡಿ**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101(ಬಿ) ಪ್ರಕಾರ**

**ಆಸ್ತಿ ವರ್ಗಾವಣೆ ಮಾಡಲು ಸರ್ಟಿಫಿಕೇಟ್**

ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರಂ ತಾಲ್ಲೂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ರಾಮನಗರಂ ಇದರ ಕಾರ್ಯದರ್ಶಿಯವರು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 71 ರಡಿ ಪಡೆದ ಆದೇಶದನ್ವಯ ಸದರಿ ಬ್ಯಾಂಕಿನ ಸಾಲಗಾರರಾದ ಶ್ರೀ ನರಸಯ್ಯ ಉರುಫ್ ಕೊತ್ತಗಯ್ಯ ಬಿನ್ ಚಿಕ್ಕಹೈದಯ್ಯ ಮತ್ತು ಕುಳ್ಳಮುನಿಯಪ್ಪ ಬಿನ್ ಚಿಕ್ಕಹೈದಯ್ಯ ಮೇದರ ದೊಡ್ಡಿ ಕೃಷ್ಣಾಪುರ ಅಂಚೆ ಕೈಲಾಂಚ ಹೋಬಳಿ ರಾಮನಗರಂ ರವರಿಂದ ಸಂಪೂರ್ಣ ಮೊತ್ತ ಚುಕ್ತವಾಗಿದ್ದು ಇವರ ಸ್ವತ್ತು ಬ್ಯಾಂಕಿನ ಹೆಸರಿಗೆ ಈ ಕಛೇರಿಯ ಆದೇಶ ಸಂಖ್ಯೆ ಸಸಸನಿರಾ:ಎಬಿಎನ್:54:2001-2002 ದಿನಾಂಕ: 4.10.2002 ರಲ್ಲಿ ವರ್ಗಾಯಿಸಿದ್ದನ್ನು ಸದರಿ ಬ್ಯಾಂಕು ಮಾರಾಟ ಮಾಡಿಲ್ಲದಿರುವುದು ಮನವರಿಕೆಯಾಗಿದೆ.

ಸದರಿ ಆಧಾರಿತ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನಹಕ್ಕು ಸಂಪೂರ್ಣವಾಗಿ ಪಾವತಿಯಾಗಿದ್ದು ಈ ಕಛೇರಿಯ ಆದೇಶ ಸಂಖ್ಯೆ ಸಸಸನಿರಾ:46:ಎಬಿಎನ್:54:01-02 ರಲ್ಲಿ ರಾಮನಗರಂ ತಾಲ್ಲೂಕ್ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾ ಅಭಿವೃದ್ಧಿ ಬ್ಯಾಂಕ್ ನಿಯಮಿತ ರಾಮನಗರ ಇದರ ಹೆಸರಿಗೆ ಇದ್ದ ಷೆಡ್ಯೂಲ್ ಸ್ಥಿರಾಸ್ತಿ ವರ್ಗಾವಣೆ ರದ್ದು ಮಾಡಲಾಗಿರುವುದರಿಂದ ಷೆಡ್ಯೂಲ್ ಸ್ಥಿರಾಸ್ತಿಯು ಶ್ರೀ ನರಸಯ್ಯ ಉರುಫ್ ಕೊತ್ತಗಯ್ಯ ಮತ್ತು ಕುಳ್ಳಮುನಿಯಪ್ಪ ಇವರಿಗೆ ಹಕ್ಕು ಅಧಿಕಾರ ನಾನು ಮತ್ತು ಬಾಧ್ಯತೆಯು ನಿರ್ದಿಷ್ಟವಾಗಿರತಕ್ಕದೆಂದು ಮತ್ತು ಸದರಿ ಸ್ವತ್ತನ್ನು ಅವರ ಇಚ್ಛಾನುಸಾರ ಉಪಯೋಗಿಸಲು ಅರ್ಹರಾಗಿರುತ್ತಾರೆಂದು ಸಹಕಾರ ಸಂಘಗಳ ನಿಯಮ 38(ಎ) (15)ಕ್ಕೆ ಒಳಪಟ್ಟಿ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101(ಬಿ)ರ ಪ್ರಕಾರ ಈ ಮೂಲಕ ಆದೇಶಿಸಲಾಗಿದೆ.

**ಆಸ್ತಿವಿವರ**

| ಕ್ರ. ಸಂ. | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ವರ್ಗಾವಣೆ ಆದೇಶದನ್ವಯ ಹಕ್ಕು ಬಾದ್ಯತೆ |
|---|---|---|---|---|---|
| 1 | 57:1 | ತಮ್ಮನಾಯ್ಕನ ಹಳ್ಳಿ | 0.20 | ಖುಷ್ಕಿ | ನರಸಯ್ಯ ಉ.ಕೊತ್ತಗಯ್ಯ ಬಿನ್ ಚಿಕ್ಕಹೈದಯ್ಯ |
| 2 | 19:4 | ತಮ್ಮನಾಯ್ಕನ ಹಳ್ಳಿ | 3.10 | ಖುಷ್ಕಿ | ಕುಳ್ಳಮುನಿಯಪ್ಪ ಬಿನ್ ಚಿಕ್ಕಹೈದಯ್ಯ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ರಾಮನಗರಂ ಉಪವಿಭಾಗ, ರಾಮನಗರಂ

ಪಿ.ಆರ್. 101

**ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ಚಿತ್ರದುರ್ಗ**

**ಪ್ರಕಟಣೆ**

**ಸಂ:ಬಿಸಿಎಂ:ಕಾತಭಮ:ಸಿಆರ್-12:2005-06, ದಿನಾಂಕ: 4ನೇ ಜನವರಿ 2006**

**ವಿಷಯ:** 2005-06ನೇ ಸಾಲಿನಲ್ಲಿ ಮತೀಯ ಅಲ್ಪಸಂಖ್ಯಾತ ಕಾನೂನು ಪದವೀಧರರನ್ನು ನ್ಯಾಯಾಂಗ ತರಬೇತಿ ಯೋಜನೆಯಡಿ ತರಬೇತಿಗೆ ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ:ಎಸ್‌ಡಬ್ಲ್ಯೂಎಲ್:68:ಎಸ್‌ಡಬ್ಲ್ಯೂ:89 ದಿನಾಂಕ:2.11.1990.

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಮತೀಯ ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧರು, ಜೈನ್ ಹಾಗೂ ಪಾರ್ಸಿ ಜನಾಂಗದ ಇಬ್ಬರು ಕಾನೂನು ಪದವೀಧರರನ್ನು ನ್ಯಾಯಾಂಗ ತರಬೇತಿ ಯೋಜನೆಯಡಿ 2005-06ನೇ ಸಾಲಿಗೆ ಆಯ್ಕೆ ಮಾಡಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಏರೋಪ್ಲೇನ್ ಬಿಲ್ಡಿಂಗ್, ಚಿತ್ರದುರ್ಗ ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಹೆಚ್ಚಿನ ಮಾಹಿತಿ ಹಾಗೂ ನಿಗದಿತ ನಮೂನೆಯ ಅರ್ಜಿಗಳನ್ನು ಪಡೆಯಬಹುದಾಗಿದೆ. ಅರ್ಜಿ ಸಲ್ಲಿಸಲು ಕಡೆಯ ದಿನಾಂಕ: 31.1.2006ಕ್ಕೆ ನಿಗದಿಪಡಿಸಿದೆ.

**ಅರ್ಜಿ ಸಲ್ಲಿಸಲು ನಿಬಂಧನೆಗಳು:**

1. ಅಭ್ಯರ್ಥಿಯು ಎಲ್.ಎಲ್.ಬಿ. ಪದವಿಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಮೊದಲು ಎರಡು ವರ್ಷದ ಅವಧಿಯೊಳಗೆ ಪಾಸು ಮಾಡಿರಬೇಕು. ವಕೀಲ ವೃತ್ತಿ ಅಭ್ಯಾಸಕ್ಕೆ ನಿಗದಿಪಡಿಸಿರುವ ಅರ್ಹತೆ ಹೊಂದಿರಬೇಕು.
2. ಸರ್ಕಾರದ ಆದೇಶ ಸಂ:ಎಸ್‌ಡಬ್ಲ್ಯೂಡಿ 132 ಎಸ್‌ಪಿಡಿ 97 ದಿನಾಂಕ: 8.2.2000 ರಂತೆ ನಿಗದಿತ ನಮೂನೆಯಲ್ಲಿ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಸಲ್ಲಿಸಬೇಕು. ಆದಾಯ ಮಿತಿ ವಾರ್ಷಿಕ 15,000-00
3. ತರಬೇತಿ ಅವಧಿಯು ನಾಲ್ಕು ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ಮಾಸಿಕ 1000-00 ರೂ.ಗಳ ತರಬೇತಿ ಭತ್ಯೆ ಪಾವತಿಸಲಾಗುವುದು. ಅಭ್ಯರ್ಥಿಗಳನ್ನು ಜಿಲ್ಲಾ ಆಯ್ಕೆ ಸಮಿತಿಯ ಮೂಲಕ ಆಯ್ಕೆ ಮಾಡಲಾಗುವುದು.

4. ಅಭ್ಯರ್ಥಿಯ ಗರಿಷ್ಠ ವಯೋಮಿತಿಯು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 30 ವರ್ಷಗಳು ಮೀರಿರಬಾರದು. ಪ್ರವರ್ಗ-1ರ ಅಭ್ಯರ್ಥಿಗಳಿಗೆ ಮಾತ್ರ ಗರಿಷ್ಠ ವಯೋಮಿತಿ 31 ವರ್ಷಗಳಾಗಿರುತ್ತದೆ.
5. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೊಂದಾಯಿಸಿರಬೇಕು. ನೊಂದಾಯಿಸಿಲ್ಲದ ಪಕ್ಷದಲ್ಲಿ ಆಯ್ಕೆಯಾದ ತಕ್ಷಣ ನೋಂದಾಯಿಸದ ಹೊರತು ಶಿಷ್ಯವೇತನ ಪಾವತಿಸಲಾಗುವುದಿಲ್ಲ.
6. ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಜಾತಿ:ಆದಾಯ ಪ್ರಮಾಣ ಪತ್ರ ಅಥವಾ ಇತರೆ ಯಾವುದೇ ತಪ್ಪು ಮಾಹಿತಿಯನ್ನು ನೀಡಿ ಆಯ್ಕೆಯಾದ ಪಕ್ಷದಲ್ಲಿ ಅಂತಹವರನ್ನು ಶಿಕ್ಷೆಗೆ ಗುರಿಪಡಿಸುವುದಲ್ಲದೆ ಶಿಷ್ಯವೇತನದ ಜೊತೆಗೆ ಶೇಕಡ 10ರ ಬಡ್ಡಿಯನ್ನು ಭೂ ಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು. ಅಲ್ಲದೆ ತರಬೇತಿಯನ್ನು ಮಧ್ಯಭಾಗದಲ್ಲಿ ಬಿಟ್ಟಲ್ಲಿ ಅವರು ಇಲಾಖೆಯಿಂದ ಪಡೆದ ಪೂರ್ಣ ಶಿಷ್ಯವೇತನವನ್ನು ಹಿಂದಿರುಗಿಸಬೇಕಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್:ಸರ್ಕಾರಿ ವಕೀಲರು: 20 ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸುತ್ತಿರುವ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.
8. ಅಪೂರ್ಣ:ಅವಧಿಮೀರಿದ:ತಪ್ಪು ಮಾಹಿತಿ ಅಥವಾ ನಿಗದಿತ ದಿನಾಂಕದ ನಂತರ ಸ್ವೀಕರಿಸಲಾದ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿ ಹಾಗೂ ಜಿಲ್ಲಾ ಅಧಿಕಾರಿ,
ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಚಿತ್ರದುರ್ಗ.

ಪಿ.ಆರ್. 103

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ,**
**ನಂ. 146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03**
**ಇವರ ನಡವಳಿಗಳು.**

**ವಿಷಯ:-** ಸ್ಥಗಿತಗೊಂಡಿರುವ ವರಲಕ್ಷ್ಮೀ ಮಹಿಳೆಯರ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.20, 1ನೇ ಕ್ರಾಸ್, ಭೀಮಜ್ಯೋತಿ ಬಡಾವಣೆ, ಆರ್.ಟಿ.ನಗರ ಅಂಚೆ ಬೆಂಗಳೂರು-560 080 ಈ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:-**
1. ಸ.ಸಂ.ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಪ್ರಕಟಣೆ ಕ್ರಮಾಂಕ:ಜೆಆರ್‌ಬಿ/ ಎಲ್‌ಕ್ಯೂಡಿ/06/ಎಲ್‌ಎಂ.ಸಿ/2004-05 ದಿನಾಂಕ:22-12-2004.
2. ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ:19-11-2005ರ ನೋಟೀಸು.

**ಪ್ರಸ್ತಾವನೆ:-**

ವರಲಕ್ಷ್ಮೀ ಮಹಿಳೆಯರ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.20, 1ನೇ ಕ್ರಾಸ್, ಭೀಮಜ್ಯೋತಿ ಬಡಾವಣೆ, ಆರ್.ಟಿ.ನಗರ ಅಂಚೆ ಬೆಂಗಳೂರು-560 080 ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿಯೂ ಹಾಗೂ ಸದರೀ ಸಹಕಾರ ಸಂಘವು ನೊಂದಣಿಯಾದ ವಿಳಾಸದಲ್ಲಿ ಕರ್ತವ್ಯ ನಿರ್ವಹಿಸದೇ ಇರುವುದಾಗಿಯೂ ಈ ಕಛೇರಿಯ ಗಮನಕ್ಕೆ ತರಲಾಗಿತ್ತು. ಆದ್ದರಿಂದ ಈ ಸಹಕಾರ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಉಲ್ಲೇಖ (1)ರಲ್ಲಿ ಕಾಣಿಸಿರುವ ದಿನಾಂಕ:22-12-2004ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಹಕಾರ ಸಂಘದ ಹೆಸರನ್ನು ದಿನಾಂಕ:2-3-2005ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಸಂಘದ ಸದಸ್ಯರಾಗಲೀ, ಸಂಘದ ಆಡಳಿತ ಮಂಡಳಿಯ ಸದಸ್ಯರಾಗಲೀ, ಸಾರ್ವಜನಿಕರಾಗಲೀ ಅಥವಾ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆಗಳಿದ್ದಲ್ಲಿ, ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ, ಮೇಲ್ಕಂಡ ಸಹಕಾರ ಸಂಘದ ಅಸ್ಥಿತ್ವದ ಬಗ್ಗೆಯಾಗಲೀ, ಇದನ್ನು ಮುಂದುವರಿಸಿಕೊಂಡು ಹೋಗುವ ಅವಶ್ಯಕತೆಯ ಬಗ್ಗೆಯಾಗಲೀ ಸಂಘದ ಆಡಳಿತ ಮಂಡಳಿಯ ಸದಸ್ಯರಿಂದಾಗಲೀ,ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕರಿಂದಾಗಲೀ, ಈವರೆಗೆ ಯಾವುದೇ ಅರ್ಜಿ ಸ್ವೀಕೃತವಾಗಿರುವುದಿಲ್ಲ.

ಆದರೂ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಮೊದಲು ಸ್ವಾಭಾವಿಕ ನ್ಯಾಯ ತತ್ವಗಳನ್ವಯ ಸಂಬಂಧಪಟ್ಟವರಿಗೆ ಅವರ ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಮತ್ತೊಂದು ಅವಕಾಶ ನೀಡುವುದು ಸೂಕ್ತವೆಂದು ತೀರ್ಮಾನಿಸಿ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ(2) ರಲ್ಲಿ ಕಾಣಿಸಿರುವ ದಿನಾಂಕ:19-11-2005 ರ ನೋಟೀಸಿನಲ್ಲಿ ಸದರೀ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸಿ, ಸಂಘದ ನೊಂದಣಿಯನ್ನು ಏಕೆ ರದ್ದುಗೊಳಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರೀ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ತಪ್ಪಿದಲ್ಲಿ ಸದರೀ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಸಂಘದ ನೊಂದಣಿಯನ್ನು ರದ್ದುಪಡಿಸಲು ಸದರಿಯವರ ಆಕ್ಷೇಪಣೆ ಏನೂ ಇಲ್ಲವೆಂದು ಪರಿಗಣಿಸಿ, ಈ ಬಗ್ಗೆ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಕೈಗೊಳ್ಳಲಾಗುವುದು ಎಂದು ಸಹ ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಸದರೀ ಸಂಘದ ಇತ್ತೀಚಿನ ಲಭ್ಯವಿರುವ ನೋಟೀಸಿಗೆ ಅಂಚೆ ನೊಂದಣಿ ಮೂಲಕ ಕಳುಹಿಸಲಾಗಿತ್ತು. ಆದರೆ ಸದರೀ ನೋಟೀಸು ಸಂಘದಿಂದ ಸ್ವೀಕೃತಗೊಳ್ಳದೆ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿದೆ.

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮೇಲ್ಕಂಡ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಸಮಾಪನೆಗೊಳಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಮಾತ್ರವಲ್ಲದೆ, ಸಂಘದ ನೊಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

**ಕ್ರಮಾಂಕ:ಡಿಆರ್‌ಬಿ–1:ಸಮಾಪನೆ:54:2005–06, ದಿನಾಂಕ: 30ನೇ ಡಿಸೆಂಬರ್ 2005**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/ 69/ಸಿಎಲ್‌ಎಂ/2001 ದಿನಾಂಕ:21–11–2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಿ.ಸಿ.ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ವರಲಕ್ಷ್ಮೀ ಮಹಿಳೆಯರ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.20, 1 ನೇ ಕ್ರಾಸ್, ಭೀಮಜ್ಯೋತಿ ಬಡಾವಣೆ, ಆರ್.ಟಿ.ನಗರ ಅಂಚೆ ಬೆಂಗಳೂರು–560 080 ಈ ಸಹಕಾರ ಸಂಘವನ್ನು ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯಿದೆಯ ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ. ಸಮಾಪನಾಧಿಕಾರಿಯವರು ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು, ಸಂಘದ ಸಮಾಪನಾ ಕಾರ್ಯವನ್ನು ತೀವ್ರಗತಿಯಲ್ಲಿ ಮುಗಿಸಿ, ಸಂಘದ ನೊಂದಣಿಯನ್ನು ರದ್ದುಪಡಿಸಲು ಆದಷ್ಟು ಬೇಗ ಪ್ರಸ್ತಾವೆಯನ್ನು ಈ ಕಛೇರಿಗೆ ಸಲ್ಲಿಸುವಂತೆ ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:30–12–2005 ರಂದು ನೀಡಿರುತ್ತೇನೆ.

**ಬಿ.ಸಿ. ಸತೀಶ್**

ಪಿ.ಆರ್. 104

ಸಹಕಾರ ಸಂಘಗಳ ಉಪನಿಬಂಧಕರು–1,
ಬೆಂಗಳೂರು ನಗರ ಜಿಲ್ಲೆ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ-577 501

**ಸನಿ 30 ಎಬಿ ಎನ್ ಸಿ.ಆರ್ / 2005-06,**

**ವಿಷಯ:** ಶ್ರೀ ಹೆಚ್.ಪಿ. ಜಗದೀಶ್ ಬಿನ್ ಜಿ. ಪರಮೇಶ್ವರಪ್ಪ ಬಸ್ ಮಾಲೀಕರು ಹುಳಿಯಾರು ರಸ್ತೆ, ಹೊಸದುರ್ಗ ಇವರನ್ನು ಸಾಲಗಾರರನ್ನಾಗಿ ಮಾಡಿರುವ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಶ್ರೀ ಗುರು ಒಪ್ಪತ್ತಿನಸ್ವಾಮಿ ಪತ್ತಿನ ಸಹಕಾರ ಸಂಘನಿ., ಹೊಸದುರ್ಗ ಇವರ ಹೆಸರಿಗೆ ವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ:**
1. ಅಮಲ್ಜಾರಿ ಸಂಖ್ಯೆ: 115/03-04.
2. ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಇವರ ಪ್ರಸ್ತಾವನೆ ಸಂಖ್ಯೆ ಮಾ ಆ ಚಿ / ಇಪಿ / ಆಸ್ತಿ ವರ್ಗಾವಣೆ 976 / 2005-06 ದಿನಾಂಕ: 20.10.2005.
3. ಈ ಕಛೇರಿಯ ನೋಟೀಸ್ ದಿನಾಂಕ 25.11.2005.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ. ಜಗದೀಶ್ ಬಿನ್ ಜಿ. ಪರಮೇಶ್ವರಪ್ಪ ಬಸ್ ಮಾಲೀಕರು, ಹುಳಿಯಾರು ರಸ್ತೆ, ಹೊಸದುರ್ಗ ಇವರು ಶ್ರೀ ಗುರು ಒಪ್ಪತ್ತಿನ ಸ್ವಾಮಿ ಪತ್ತಿನ ಸಹಕಾರ ಸಂಘ ನಿ., ಹೊಸದುರ್ಗ ಇದರಲ್ಲಿ ಸಾಲ ಪಡೆದು ರೂ.3,24,130-00 (ದಿನಾಂಕ 30.6.2005ಕ್ಕೆ ಇದ್ದಂತೆ) ಗಳಿಗೆ ಸುಸ್ತಿದಾರರಾಗಿರುತ್ತಾರೆ. ಅವರುಗಳು ಸಾಲವನ್ನು ಮರುಪಾವತಿ ಮಾಡದೆ ಇರುವ ಪ್ರಯುಕ್ತ ಅವರುಗಳ ವಿರುದ್ಧ ಸಂಘದವರು ದಾವಾ ಡಿಕ್ರಿ ಪಡೆದಿರುತ್ತಾರೆ. ಆದಾಗ್ಯೂ ಸಹ ಸದರಿಯವರು ಸಾಲ ಮರುಪಾವತಿ ಮಾಡದೇ ಇರುವ ಪ್ರಯುಕ್ತ ಅಮಲ್ಜಾರಿ ಅರ್ಜಿ ಪಡೆದು ಈ ಕೆಳಗೆ ನಮೂದಿಸಿರುವ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ದಿನಾಂಕ:25.8.2005 ರಂದು ಬಹಿರಂಗ ಹರಾಜಿಗೆ ತಂದಿರುತ್ತಾರೆ. ಆದಾಗ್ಯೂ ಸದರಿಯವರು ಸಂಘಕ್ಕೆ ಸಾಲ ಮರುಪಾವತಿ ಮಾಡಿರುವುದಿಲ್ಲ. ಆದುದರಿಂದ ಸದರಿ ದಿನಾಂಕದಂದು ಹರಾಜು ನಡೆಸಲಾಗಿ, ಹರಾಜಿನಲ್ಲಿ ಯಾವ ಬಿಡ್‌ದಾರರು ಭಾಗವಹಿಸದೇ ಇರುವ ಪ್ರಯುಕ್ತ ಅವರುಗಳ ಸ್ಥಿರಾಸ್ತಿಯನ್ನು ಸಂಘದ ಹೆಸರಿನಲ್ಲಿ ನಿಲ್ಲಿಸಿ ಸದರಿಯವರ ಸ್ಥಿರಾಸ್ತಿಯನ್ನು ಕಾಯ್ದೆ ಕಲಂ 101(ಬಿ) ಅನ್ವಯ ಸಂಘದ ಹೆಸರಿಗೆ ವರ್ಗಾವಣೆ ಮಾಡಲು ಆದೇಶ ನೀಡುವಂತೆ ಮಾರಾಟಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಬಗ್ಗೆ ಈ ಕಛೇರಿಯಿಂದ ದಿನಾಂಕ 25.11.2005 ರಂದು ಸಾಲ ಮರುಪಾವತಿ ಮಾಡದಿದ್ದಲ್ಲಿ ನಿಮ್ಮ ಸ್ಥಿರಾಸ್ತಿಗಳನ್ನು ಅಂದರೆ ಹೊಸದುರ್ಗ ಪುರಸಭೆಯ ಅಸೆಸ್‌ಮೆಂಟ್ ನಂ. 874-709ರ ಸೈಟ್ ನಂ. 16.2 X 18.2 ಮೀ ಅಳತೆ ಇರುವ ನಿವೇಶನ ಚಕ್ಕುಬಂದಿ ಪೂರ್ವಕ್ಕೆ : ಎಂ.ಆರ್. ರಾಮಮೂರ್ತಿ ಮನೆ, ಪಶ್ಚಿಮಕ್ಕೆ : ರಸ್ತೆ, ಉತ್ತರಕ್ಕೆ : ಕನ್ಸರ್‌ವೆನ್ಸಿ ದಕ್ಷಿಣಕ್ಕೆ : ರಸ್ತೆ, ಇದನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡುವುದಾಗಿ ತಿಳಿಸಿದಾಗ್ಯೂ ಸದರಿಯವರು ಸಂಘಕ್ಕೆ ಹಣವನ್ನು ಜಮಾ ಮಾಡಿರುವುದಿಲ್ಲ. ಆದುದರಿಂದ ಅವರ ಮೇಲ್ಕಂಡ ಸ್ಥಿರಾಸ್ತಿಯನ್ನು ಸಂಘದ ಹೆಸರಿಗೆ ವರ್ಗಾವಣೆ ಮಾಡಿ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

**ಸನಿ 30 / ಎಬಿಎನ್ / ಕಲಂ 101(ಬಿ) ಶ್ರೀ ಗು. ಒ. ಸ್ವಾ.ಪ.ಸ.ಸಂ. ಹೊ / 05-06, ದಿನಾಂಕ: 10ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಕೆ. ಪೂರ್ಣಪ್ರಜ್ಞಾಚಾರ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ ಆದ ನಾನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 (ಬಿ) ಮತ್ತು ನಿಯಮ 1960ರ ನಿಯಮ 38 ಎ ನಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್.ಪಿ. ಜಗದೀಶ್ ಬಿನ್ ಜಿ. ಪರಮೇಶ್ವರಪ್ಪ, ಬಸ್ ಮಾಲೀಕರು, ಹುಳಿಯಾರು ರಸ್ತೆ, ಹೊಸದುರ್ಗ ಇವರ ಕೆಳಗೆ ತೋರಿಸಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಶ್ರೀ ಗುರು ಒಪ್ಪತ್ತಿನ ಸ್ವಾಮಿ ಪತ್ತಿನ ಸಹಕಾರ ಸಂಘ ನಿ., ಹೊಸದುರ್ಗ ಇವರ ಹೆಸರಿಗೆ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿ**

ಹೊಸದುರ್ಗ ಪುರಸಭೆಯ ಹಳೆಮಿಡ್ಲು ಸ್ಕೂಲ್ ಬಡಾವಣೆ ಅಸೆಸ್‌ಮೆಂಟ್ ನಂ. 874-709 ಸೈಟ್ ನಂ. 16.2 X 18.2 ಮೀ ಅಳತೆ ಇರುವ ನಿವೇಶನ ಇದಕ್ಕೆ ಚಕ್ಕುಬಂದಿ ಈ ಕೆಳಕಂಡಂತೆ ಇರುತ್ತದೆ.

ಪೂರ್ವಕ್ಕೆ : ಎಂ.ಆರ್. ರಾಮಮೂರ್ತಿ ಮನೆ
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಕನ್ಸರ್‌ವೆನ್ಸಿ
ದಕ್ಷಿಣಕ್ಕೆ : ರಸ್ತೆ

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ದಿ. 10.1.06 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಪಿ.ಆರ್. 105 ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ - 577 501.

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ಇಡಿ 306 ಡಿಪಿಐ 2004, ಬೆಂಗಳೂರು, ದಿನಾಂಕ: 5ನೇ ಜನವರಿ 2006**

**ವಿಷಯ:** ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ವೃಂದದವರ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:1.1.2004 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:1.1.2004 ರಲ್ಲಿದ್ದಂತೆ ತಯಾರಿಸಿ, ದಿನಾಂಕ:30.12.2004 ರಂದು ಅಧಿಸೂಚನೆ ಹೊರಡಿಸಿ, ಬಾಧಿತರಾದವರಿಂದ ಆಕ್ಷೇಪಣೆಗಳನ್ನು ಈ ಅಧಿಸೂಚನೆ ಪ್ರಕಟಗೊಂಡ ಒಂದು ತಿಂಗಳ ಒಳಗಾಗಿ, ಸರ್ಕಾರದ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ನಿಗದಿತ ಅವಧಿಯೊಳಗಾಗಿ ಯಾವುದೇ ಅಧಿಕಾರಿಗಳು ಆಕ್ಷೇಪಣೆ ಸಲ್ಲಿಸಿರುವುದಿಲ್ಲವಾದ್ದರಿಂದ ಅನುಬಂಧದಲ್ಲಿರುವಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸ್ವರ್ಣಲತಾ. ಎಂ. ಭಂಡಾರೆ,**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇವೆಗಳು-1,2)

**ಅನುಬಂಧ-1**

**ದಿನಾಂಕ:1.1.2004 ರಲ್ಲಿದ್ದಂತೆ ಪಪೂಶಿ ಇಲಾಖೆಯ ಉಪ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹಿಂದಿನ ಜೇಷ್ಠತಾ ಸಂಖ್ಯೆ | ಉಪ ನಿರ್ದೇಶಕರ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಾಂಶುಪಾಲರಾಗಿ ಸೇವೆಗೆ ಸೇರಿದ ದಿನಾಂಕ | ಉಪನಿರ್ದೇಶಕರಾಗಿ ಸೇವೆಗೆ ಸೇರಿದ ದಿನಾಂಕ |
|---|---|---|---|---|---|---|
| 1 | 63 | ಕೆ. ಅಬ್ದುಸ್ ಸಲೀಂ | 01/07/1948 | 01/08/1973 | 15/07/1981 | 10/07/1995 |
| 2 | 77 | ಎನ್.ಕೆ. ಸಾಕೇನವರ್ | 01/06/1946 | 12/12/1975 | 20/12/1983 | 01/01/1998 |
| 3 | 78 | ಬಿ. ರುದ್ರಪ್ಪ | 18/02/1947 | 12/12/1975 | 20/12/1983 | 01/01/1998 |
| 4 | 79 | ಸಿ. ರಾಧ | 18/05/1947 | 15/12/1975 | 20/12/1983 | 01/01/1998 |
| 5 | 80 | ಸಿ. ಮಹಾದೇವ | 01/06/1947 | 05/12/1945 | 20/12/1983 | 06/03/1998 |
| 6 | 81 | ಕೆ. ದೊರೈರಾಜ್ | 08/06/1947 | 29/11/1975 | 20/12/1983 | 21/07/1998 |
| 7 | 82 | ಗೋವಿಂದಯ್ಯ | 09/06/1947 | 06/12/1975 | 20/12/1983 | 21/07/1998 |
| 8 | 83 | ಆರ್. ಸರೋಜ | 10/07/1947 | 04/12/1975 | 20/12/1983 | 21/07/1998 |
| 9 | 84 | ಟಿ.ಆರ್. ಯಶೋಧರ | 15/07/1947 | 03/12/1975 | 20/12/1983 | 14/03/2000 |
| 10 | 85 | ಶ್ರೀರಂಗರಾಜು | 12/01/1948 | 12/01/1975 | 20/12/1983 | 14/03/2000 |
| 11 | 86 | ಆರ್.ಆರ್. ಮೂಲಿಮನಿ | 10/01/1948 | 01/12/1975 | 20/12/1983 | 14/03/2000 |
| 12 | 87 | ಆರ್.ಪಿ. ಚಾವಾಣ್ | 01/03/1948 | 24/12/1975 | 20/12/1983 | 14/03/2000 |
| 13 | 88 | ಎಸ್.ಪಿ. ನಾಯಕ್ | 24/03/1948 | 04/12/1975 | 20/12/1983 | 06/09/2000 |
| 14 | 89 | ಬಿ.ಎನ್. ಕೃಷ್ಣಪ್ಪ | 01/04/1948 | 09/12/1975 | 20/12/1983 | 06/09/2000 |
| 15 | 90 | ಪಿ.ಡಿ. ಕುಮಾರಸ್ವಾಮಿ | 10/04/1948 | 05/12/1975 | 20/12/1983 | 06/08/2001 |
| 16 | 91 | ಸಿ.ಆರ್. ರಂಗಸ್ವಾಮಿ | 05/02/1948 | 04/12/1975 | 20/12/1983 | 06/08/2001 |
| 17 | 92 | ಆರ್.ಎಂ. ಮಾಡಲಗೇರಿ | 20/11/1947 | 04/12/1975 | 18/08/1984 | 06/08/2001 |
| 18 | 93 | ಸಿದ್ದನಂಜಪ್ಪ .ಎಸ್ | 17/10/1948 | 01/12/1975 | 18/08/1984 | 06/08/2001 |
| 19 | 94 | ಮಹಾಲಿಂಗಂ .ಜಿ | 06/01/1949 | 08/12/1975 | 18/08/1984 | 06/08/2001 |
| 20 | 95 | ಬಿ. ಶಿವಣ್ಣ | 12/01/1949 | 19/12/1975 | 18/08/1984 | 05/10/2001 |
| 21 | 96 | ಜಿ.ಆರ್. ನರಸಿಂಹಮೂರ್ತಿ | 09/10/1946 | 15/07/1981 | 15/07/1981 | 03/10/2002 |
| 22 | 97 | ಹೆಚ್.ಕೆ. ಪ್ರಸನ್ನಕುಮಾರ್ | 10/03/1949 | 27/12/1975 | 18/08/1984 | 03/10/2002 |

| ಕ್ರ. ಸಂ. | ಹಿಂದಿನ ಜೇಷ್ಠತಾ ಸಂಖ್ಯೆ | ಉಪ ನಿರ್ದೇಶಕರ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಾಂಶುಪಾಲರಾಗಿ ಸೇವೆಗೆ ಸೇರಿದ ದಿನಾಂಕ | ಉಪನಿರ್ದೇಶಕರಾಗಿ ಸೇವೆ ಸೇರಿದ ದಿನಾಂಕ |
|---|---|---|---|---|---|---|
| 23 | 98 | ಡಿ. ಸಿದ್ದರಾಜು | 01/06/1949 | 04/12/1975 | 02/01/1985 | 03/10/2002 |
| 24 | 99 | ಎಂ. ಚನ್ನಕೇಶವನಾಯಕ್ | 08/06/1949 | 24/12/1975 | 02/01/1985 | 03/10/2002 |
| 25 | 100 | ಎಸ್. ರಾಜೇಂದ್ರನ್ | 14/06/1949 | 24/12/1975 | 02/01/1985 | 03/10/2002 |
| 26 | 101 | ಹೆಚ್.ಎನ್. ರಮೇಶ್ | 02/07/1949 | 01/12/1975 | 02/01/1985 | 03/10/2002 |
| 27 | 102 | ಎಸ್.ಕೆ. ಕದಂ | 12/12/1949 | 06/12/1975 | 06/12/1975 | 13/05/2003 |
| 28 | 103 | ಎಸ್. ಮಹಾದೇವ | 01/02/1950 | 05/12/1975 | 05/12/1975 | 13/06/2003 |

**ಸ್ವರ್ಣಲತಾ. ಎಂ. ಭಂಡಾರೆ,**

ಪಿ.ಆರ್. 106 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇವೆಗಳು-1,2)

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಎಂವೈಡಬ್ಲ್ಯು-5921 (ಎಂಜಿವಿ) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲೀಕರು ಶ್ರೀ ಅಬ್ದುಲ್ ಲತೀಫ್, ಬಿ.ಹೆಚ್. ರಸ್ತೆ, ಬೀರೂರು ಅಂಚೆ, ಇವರ ಅರ್ಜಿ ದಿನಾಂಕ: 7.12.05.

ವಾಹನ ಸಂ: ಎಂವೈಡಬ್ಲ್ಯು-5921 (ಎಂಜಿವಿ) ವಾಹನದ ನೊಂದಾಯಿತ ಮಾಲೀಕರಾದ ಶ್ರೀ ಅಬ್ದುಲ್ ಲತೀಫ್, ಬಿ.ಹೆಚ್. ರಸ್ತೆ, ಬೀರೂರು, ಕಡೂರು ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ 31.12.05 ರವರೆಗೆ ಪಾವತಿಸಿದ್ದು, ದಿ: 7.12.05 ರಂದು ಕಛೇರಿಗೆ ಸದರಿ ವಾಹನದ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೊಂದಣಿ ರದ್ದು ಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

### ಆದೇಶ ಸಂ: ಪ್ರಾಸಾಅ:ಚಿಮ:ಎಫ್‌ಟಿ: ಸಾರಿಗೆ:05-06, ದಿನಾಂಕ: 7ನೇ ಡಿಸೆಂಬರ್ 2005

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: ಎಂವೈಡಬ್ಲ್ಯು-5921 (ಎಂಜಿವಿ) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

1. ವಾಹನ ಸಂ : ಎಂವೈಡಬ್ಲ್ಯು-5921
2. ವರ್ಗ : ಮಧ್ಯಮ ಸರಕು ವಾಹನ
3. ಚಾಸಿಸ್ ಸಂ : 312 0566605516
4. ಇಂಜಿನ್ ಸಂ : 312 915 6605513
5. ಮಾಡೆಲ್ : 1966
6. ಹೆಚ್.ಪಿ.ಎ : ಇರುವುದಿಲ್ಲ.
7. ಮಾಲೀಕರು : ಶ್ರೀ ಅಬ್ದುಲ್ ಲತೀಫ್ ಬಿನ್ ಅಬ್ದುಲ್ ಸಾಬ್, ಬಿ.ಹೆಚ್. ರಸ್ತೆ, ಬೀರೂರು ಅಂಚೆ, ಕಡೂರು.

**ಆರ್. ರಾಜಶೇಖರ್**

ಪಿ.ಆರ್. 107 ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಎಂವೈಎನ್-3291 (ಎಸ್:ಸಿ) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಮಾಲೀಕರು ಶ್ರೀ ಜಹೀರ್ ಅಹ್ಮದ್, ಚಿಕ್ಕಮಗಳೂರು ಇವರ ಅರ್ಜಿ ದಿನಾಂಕ:
2. ಅಧ್ಯರ್ಪಣ ಸಂ: 52:84-85 ದಿ:1.10.84.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿ:10.12.87.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂ: ಎಂವೈಎನ್-3291 (ಹೆಚ್‌ಪಿವಿ) ಎಸ್‌ಸಿ ಇದರ ನೊಂದಾಯಿತ ಮಾಲೀಕರಾದ ಶ್ರೀ ಜಹೀರ್ ಅಹ್ಮದ್, ಚಿಕ್ಕಮಗಳೂರು ರವರು ಸದರಿ ವಾಹನದ ತೆರಿಗೆಯನ್ನು 30.9.84 ರವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿ ಪಡೆಯಲು ಸದರಿ ವಾಹನದ ಅನುಪಯೋಗದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆಗಳನ್ನು ಅಧ್ಯರ್ಪಣ ಸಂ:52:84-85ರಲ್ಲಿ ದಿ:1.10.84 ರಿಂದ ಅಧ್ಯರ್ಪಣ ಮಾಡಿದ್ದು, ಇಂದಿಗೂ ಅಧ್ಯರ್ಪಣ ಮುಂದುವರೆದಿದೆ. ಈ ವಾಹನವು ಚಾಲನಾ ಸ್ಥಿತಿಯಲ್ಲಿ ಇಲ್ಲದಿದ್ದು, ನೊಂದಣಿ ರದ್ದು ಪಡಿಸಲು ಅರ್ಜಿ ಸಲ್ಲಿಸಲು ಮಾಲೀಕರಿಗೆ ಹಲವು ಬಾರಿ ತಿಳಿಸಿದ್ದಾಗ್ಯೂ ಅರ್ಜಿ ನೀಡಿರುವುದಿಲ್ಲ.

ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರವರು ಈ ವಾಹನದ ಸ್ಥಿತಿಗತಿ ಪರಿಶೀಲಿಸಿ ಕಛೇರಿಗೆ ದಿ:10.12.87 ರಂದು ಸಲ್ಲಿಸಿದ ವರದಿಯಲ್ಲಿ ಈ ವಾಹನದ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ ಸಂ: ಪ್ರಾಸಾಅ:ಚಿಮ:ಎಫ್‌ಟಿ: ಸಾರಿಗೆ:05-06, ದಿನಾಂಕ: 9ನೇ ಡಿಸೆಂಬರ್ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: ಎಂವೈಎನ್-3291 (ಸ್ಟೇ:ಕ್ಯಾ) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1. | ವಾಹನ ಸಂ | : | ಎಂವೈಎನ್-3291 |
| 2. | ವರ್ಗ | : | |
| 3. | ಮಾಡೆಲ್ | : | ಹೆಚ್‌ಪಿವಿ:ಸ್ಟೇ:ಕ್ಯಾ |
| 4. | ತಯಾರಿಕೆ | : | 1963 |
| 5. | ಚಾಸಿಸ್ ಸಂ | : | 312 07 62610200 |
| 6. | ಯಂತ್ರ ಸಂ | : | 312 978 2610491 |
| 7. | ತೆರಿಗೆ ಪಾವತಿ | : | 30.9.84 |
| 8. | ಹೆಚ್.ಪಿ.ಎ | : | ಇಲ್ಲ |
| 9. | ನೊಂದಣಿ ದಿ: | : | 2.4.63 |
| 10. | ಮಾಲೀಕರು | : | ಶ್ರೀ ಜಹೀರ್ ಅಹ್ಮದ್ ಬಿನ್ ಮೊಹ್ಮದ್ ಜಫರ್, ಗೌರಿಕಾಲುವೆ, ಮಲ್ಲೇನಹಳ್ಳಿ ಅಂಚೆ, ಚಿಕ್ಕಮಗಳೂರು. |

**ಆರ್. ರಾಜಶೇಖರ್**

ಪಿ.ಆರ್. 108 ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:30/ಡಿಸಿಪಿ/ಸಂ.ಪೂ/2005, ದಿನಾಂಕ: 4ನೇ ಡಿಸೆಂಬರ್ 2005**

ಬೆಂಗಳೂರು ಆಡುಗೋಡಿ ಸಂಚಾರ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿನ ಡಾ: ಎಂ.ಹೆಚ್. ಮರಿಗೌಡ ರಸ್ತೆ ಬೆಂಗಳೂರು ನಗರ ಹೆಸರಾಂತ ಲಾಲ್‌ಬಾಗ್ ಹೂವಿನ ತೋಟದ ಉತ್ತರ ದ್ವಾರದಿಂದ ಕೆ.ಹೆಚ್. ವೃತ್ತದ ಜಂಕ್ಷನ್‌ವರೆಗೆ ಇರುವ ರಸ್ತೆಯ ಭಾಗವು ಕಿರಿದಾಗಿದ್ದು, ರಸ್ತೆಯ ದಕ್ಷಿಣ ಭಾಗದಲ್ಲಿ ಲಾಲ್‌ಬಾಗ್ ಹೂವಿನ ತೋಟ ಮತ್ತು ಉತ್ತರ ಭಾಗದಲ್ಲಿ ಅಲ್ ಅಮೀನ್ ಕಾಲೇಜ್ ಹಾಗೂ ಹೆಚ್ಚಿನ ಸಂಖ್ಯೆಯ ವಾಣಿಜ್ಯ ಮಳಿಗೆಗಳು ಇರುತ್ತವೆ. ಡಾ: ಎಂ.ಹೆಚ್. ಮರಿಗೌಡ ರಸ್ತೆಯ ಈ ಭಾಗದಲ್ಲಿ ದ್ವಿಮುಖ ವಾಹನಗಳ ಸಂಚಾರವಿದ್ದು, ಪ್ರಸ್ತುತವಿರುವ ವಾಹನಗಳ ಸಾಂದ್ರತೆಗೆ ತಕ್ಕಂತೆ ರಸ್ತೆಯು ಇಲ್ಲದೇ ಇರುವುದರಿಂದ ಆಗಾಗ್ಗೆ ವಾಹನ ಸಂಚಾರ ಸ್ಥಗಿತಗೊಳ್ಳುತ್ತಿರುವುದಲ್ಲದೆ ರಸ್ತೆ ಅಪಘಾತಗಳು ಸಂಭವವಿಸುತ್ತಿರುತ್ತವೆ. ಪ್ರಯುಕ್ತ ಲಾಲ್‌ಬಾಗ್ ಉತ್ತರ ದ್ವಾರದಿಂದ ಕೆ.ಹೆಚ್. ರಸ್ತೆ ವೃತ್ತದವರೆವಿಗೆ ಇರುವ ಡಾ: ಎಂ.ಹೆಚ್. ಮರಿಗೌಡ ರಸ್ತೆಯ ಭಾಗದಲ್ಲಿ ಸಂಭವಿಸುತ್ತಿರುವ ಅಪಘಾತಗಳು ಮತ್ತು ಉಂಟಾಗುತ್ತಿರುವ ಸಂಚಾರ ದಟ್ಟಣೆ ಮತ್ತು ಸ್ಥಗಿತವನ್ನು ತಿಳಿಗೊಳಿಸಿ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರದ ಹಿತದೃಷ್ಟಿಯಿಂದ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೆ ತರುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

**ಡಾ: ಎಂ.ಹೆಚ್. ಮರಿಗೌಡ ರಸ್ತೆ:** ಡಾ: ಎಂ.ಹೆಚ್. ಮರಿಗೌಡ ರಸ್ತೆಯಲ್ಲಿನ ಕೆ.ಹೆಚ್. ರಸ್ತೆ ವೃತ್ತದಿಂದ ಲಾಲ್‌ಬಾಗ್ ತೋಟದ ಉತ್ತರ ದ್ವಾರದವರೆಗೆ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ, ಕೆ.ಹೆಚ್. ರಸ್ತೆ ವೃತ್ತದಿಂದ ಲಾಲ್‌ಬಾಗ್ ಉತ್ತರ ದ್ವಾರದವರೆಗೆ ಪೂರ್ವದಿಂದ ಪಶ್ಚಿಮ ದಿಕ್ಕಿಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಲಾಲ್‌ಬಾಗ್ ಉತ್ತರ ದ್ವಾರದಿಂದ ಕೆ.ಹೆಚ್. ವೃತ್ತದವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಿದೆ. ಡಾ: ಎಂ.ಹೆಚ್. ಮರಿಗೌಡ ರಸ್ತೆಗೆ ಹೋಗಲು ಲಾಲ್‌ಬಾಗ್ ರಸ್ತೆಯಲ್ಲಿ ಬರುವ ವಾಹನಗಳು ಊರ್ವಶಿ ಜಂಕ್ಷನ್‌ನಲ್ಲಿ ಎಡ ತಿರುವು ಪಡೆದು ಸಿದ್ದಯ್ಯ ರಸ್ತೆ ಮುಖಾಂತರ ಡಾ: ಎಂ.ಹೆಚ್. ಮರಿಗೌಡ ರಸ್ತೆಯನ್ನು ಸೇರಬಹುದಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 4.12.2005 ರಿಂದ ಒಂದು ತಿಂಗಳ ಕಾಲ ಪ್ರಾಯೋಗಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:4.12.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್. 109 ಪೊಲೀಸ್ ಕಮೀಷನರ್, ಬೆಂಗಳೂರು ನಗರ

## ಪ್ರಥಮ ವರ್ಗದ ನ್ಯಾಯಿಕ ದಂಡಾಧಿಕಾರಿಗಳ ದ್ವಿತೀಯ ನ್ಯಾಯಾಲಯ, ಹುಬ್ಬಳ್ಳಿ

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದು ಏನೆಂದರೆ, ಈ ನ್ಯಾಯಾಲಯದ ಕಾರ್ಯ ವ್ಯಾಪ್ತಿಯಲ್ಲಿರುವ ಈ ಕೆಳಕಂಡ, ಯಾರೂ ವಾರ್ಸಾ ಇಲ್ಲದ ಮುದ್ದೆಮಾಲಿನ ಬಗ್ಗೆಯ ಹಕ್ಕುಳ್ಳ ವ್ಯಕ್ತಿ ಇದ್ದಲ್ಲಿ, ಈ ಪ್ರಕಟಣೆಯಾದ ದಿನಾಂಕದಿಂದ ಒಂದು ತಿಂಗಳೊಳಗಾಗಿ ನಿಮ್ಮ ಹಕ್ಕನ್ನು ಸ್ಥಾಪನೆ ಮಾಡಲು ಅವಧಿ ನಿಗದಿಪಡಿಸಿರುತ್ತದೆ. ಇಲ್ಲವಾದಲ್ಲಿ, ಸದರೀ ಮಾಲನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಕಾನೂನು ರೀತಿಯಿಂದ ವಿಲೇವಾರಿ ಮಾಡಲಾಗುತ್ತದೆ. ಅಂತಾ ಈ ಮೂಲಕ ತಿಳಿಯಪಡಿಸಲಾಗಿದೆ.

**ಮುದ್ದೆಮಾಲಿನ ವಿವರ**

| | | | | |
|---|---|---|---|---|
| 1. | ಪಿ.ಆರ್. ನಂ: | 249-05 | ಸಿ.ಸಿ. ನಂ: 79-05 | 1) 01 ಒಂದು ಬಜಾಜ್ ಆರ್‌ಟಿಜಡ್ ಮೋಟಾರ್ ಸೈಕಲ್ ನಂ: ಸಿಕೆಡಬ್ಲ್ಯೂ-5584 ಕಪ್ಪು ಬಣ್ಣದ್ದು, ಚಾಸ್ಸಿ ನಂ: 30ಸಿ 068308 ಇಂಜಿನ್ ನಂ: 30ಇ 067555. ಅ.ಕಿ.10,000-00. |
| 2. | ಪಿ.ಆರ್. ನಂ: | 5-2006 | ಸಿ.ಸಿ. ನಂ:749:04. | 1) 01 ಒಂದು ಬಜಾಜ್ ಕಂಪನಿ ಕ್ಯಾಲಿಬರ್ ಮೋಟಾರ್ ಸೈಕಲ್ ನಂ. ಕೆಎ 22 ಎಲ್ 6037 ಚಾಸ್ಸಿ ನಂ: ಡಿಡಿಎಫ್‌ಬಿಇಎಮ್ 62767 ಅ.ಕಿ.15,000-00 |
| 3. | ಪಿ.ಆರ್. ನಂ: | 12-2006 | ಸಿ.ಸಿ.ನಂ:1033-2000 | 1) 01 ಒಂದು ಲೂನಾ ಸೂಪರ್ ನಂಬರ್ ಪ್ಲೇಟ್ ಇಲ್ಲದ್ದು ಚಾಕಲೇಟ್ ಕಲರ್ ಹಳೇದು ಅ.ಕಿ.ರೂ.5,500-00<br>2) 01 ಒಂದು ಲೂನಾ ಸೂಪರ್ ನಂಬರ್ ಸಿಆರ್‌ಡಬ್ಲ್ಯೂ 9263 ಹಸಿರು ಬಣ್ಣದ್ದು, ಹಳೇದು ವಾಪರಿಸಿದ್ದು. ಅ.ಕಿ.3,500-00 |
| 4. | ಪಿ.ಆರ್. ನಂ: | 13-2006 | ಸಿ.ಸಿ.ನಂ: 88-2003. | (1) 01 ಒಂದು ಲೂನಾ ಟಿಎಫ್‌ಆರ್ ನಂ: ಸಿಡಬ್ಲ್ಯುಎಚ್ 8846 ಇಂಜಿನ್-ನಂ: ಕೆ.ಇ. 678934 ಹಸಿರು ಬಣ್ಣದ್ದು ಅದೆ. ಅ.ಕಿ.1,000-00 |
| 5. | ಪಿ.ಆರ್. ನಂ: | ಸಿ18-2006 | ಸಿ.ಸಿ.ನಂ:1287-2000. | (1) 01 ಒಂದು ಟಿ ವಿ ಎಸ್ ಸುಜುಕಿ ಮ್ಯಾಕ್ಸ್ 100 ಮೋಟಾರ್ ಸೈಕಲ್ ಕಪ್ಪು ಬಣ್ಣದ್ದು ಇಂಜಿನ್ ನಂ:150 ಎಮ್ 558919 ಚೆಸ್ಸಿ ನಂ:1506 ಎಫ್ 51 5537 ಅ.ಕಿ.15,000-00:<br>2) 01 ಒಂದು ಯಮಹಾ ಮೋಟಾರ್ ಸೈಕಲ್ ನೀಲಿ ಬಣ್ಣದ್ದು, ಇದರ ಚಸ್ಸಿ ನಂ.ಐಸಿಐಒ: 28789.ಅ.ಕಿ.25,000-00 |

ಸ್ಥಳ: ಹುಬ್ಬಳ್ಳಿ
ದಿನಾಂಕ 16.01.2006
ಪಿ.ಆರ್. 110

**ಮಹಮ್ಮದ್ ಇಸ್ಮಾಯಿಲ್**
ಪ್ರಥಮ ವರ್ಗದ ನ್ಯಾಯಿಕ ದಂಡಾಧಿಕಾರಿಗಳು,
ದ್ವಿತೀಯ ನ್ಯಾಯಾಲಯ, ಹುಬ್ಬಳ್ಳಿ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ

### ನಮೂನೆ-10

### ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಅಡಿಯಲ್ಲಿ ರೂಪಿಸಲಾಗಿರುವ ನಿಯಮಗಳನ್ವಯ 38ನೇ ರೂಲಿನ (7)ನೆಯ ಕಲಂ ಪ್ರಕಾರ ನೀಡಿರುವ "ಸೇಲ್ ಸರ್ಟಿಫಿಕೇಟ್"

**ಹೆಸರು:** ಶ್ರೀ ಕೆ. ಪೂರ್ಣಪ್ರಜ್ಞಾಚಾರ್
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ.

**ಅಮಲ್ಜಾರಿ ಅರ್ಜಿ ಸಂಖ್ಯೆ : 327 / 2004-05**

| **ಡಿಕ್ರಿದಾರರು** | **ವಿರುದ್ಧ** | **ಬಾಕಿದಾರರು** |
|---|---|---|
| ವ್ಯವಸ್ಥಾಪಕರು<br>ಶ್ರೀ ಗುರು ಒಪ್ಪತ್ತಿನ ಸ್ವಾಮಿ ಪತ್ತಿನ ಸಹಕಾರ ಸಂಘ ನಿ.,<br>ಹೊಸದುರ್ಗ | | ಜಿ. ಲಕ್ಷ್ಮೀದೇವಿ ತಂದೆ ಗಿರಿಯಪ್ಪ,<br>ಅರಳಿಹಳ್ಳಿ ಗೊಲ್ಲರಹಟ್ಟಿ ಹೊಸದುರ್ಗ ತಾ. |

ಈ ಮೂಲಕ ದೃಢೀಕರಿಸುವುದೇನೆಂದರೆ, ಶ್ರೀಮತಿ ಸಿ. ರತ್ನಮ್ಮ ಕೋಂ ಹರಳರಾಜ್ (ಜಾತಿ) ಭೋವಿ (ಧರ್ಮ) ಹಿಂದೂ (ವೃತ್ತಿ) ಕಿರಿಯ ಆರೋಗ್ಯ ಸಹಾಯಕಿ (ವಯಸ್ಸು) 45 ವರ್ಷ (ವಾಸಸ್ಥಳ) ವಿನಾಯಕ ಬಡಾವಣೆ, ಹೊಸದುರ್ಗ ಇವರು ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ ಇವರು ಬಹಿರಂಗ ಹರಾಜಿನಲ್ಲಿ ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಕೊಂಡಿದ್ದಾರೆ. ಸದರಿ ಸ್ಥಿರ ಸ್ವತ್ತುಗಳನ್ನು ಶ್ರೀ ಗುರು ಒಪ್ಪತ್ತಿನ ಸ್ವಾಮಿ ಪತ್ತಿನ ಸಹಕಾರ ಸಂಘ ನಿಯಮಿತ, ಹೊಸದುರ್ಗ ಇವರಿಗೆ ಶ್ರೀಮತಿ ಜಿ. ಲಕ್ಷ್ಮೀದೇವಿ ತಂದೆ ಗಿರಿಯಪ್ಪ (ಜಾತಿ) ಗೊಲ್ಲರು (ಧರ್ಮ) ಹಿಂದೂ (ವೃತ್ತಿ) ಗೃಹಿಣಿ (ವಾಸಸ್ಥಳ) ಅರಳಿಹಳ್ಳಿ ಗೊಲ್ಲರಹಟ್ಟಿ, ಹೊಸದುರ್ಗ ತಾಲ್ಲೂಕು, ಇವರಿಂದ ಬರಬೇಕಾದ ಬಾಕಿ ಮೊತ್ತಕ್ಕೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯದಲ್ಲಿ ಡಿಕ್ರಿ/ಅವಾರ್ಡ್ ತೀರ್ಪು ಆದೇಶ ಸಂಖ್ಯೆ 129/2004-05 ದಿನಾಂಕ 1.7.2004ರ ರೀತ್ಯಾ ಅಮಲ್ಜಾರಿ ಕ್ರಮದಲ್ಲಿ ಹರಾಜು ಮಾಡಲಾಗಿ ಕೊಂಡ ಮೊತ್ತ 85,000-00 (ರೂಪಾಯಿ ಎಂಭತ್ತೈದು ಸಾವಿರ ಮಾತ್ರ) ಗಳು ಸಂಪೂರ್ಣವಾಗಿ ಪಾವತಿಯಾಗಿದ್ದು, ನಾನು ದಿನಾಂಕ: 10.01.05 ರಂದು ಸದರಿ ಹರಾಜನ್ನು (ಮಾರಾಟವನ್ನು) ಖಾಯಂಗೊಳಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ.

**ಸ್ಥಿರ ಸೊತ್ತುಗಳ ಷೆಡ್ಯೂಲ್**

ನೊಂದಣಿ ಜಿಲ್ಲೆ : ಚಿತ್ರದುರ್ಗ
ನೊಂದಣಿ ತಾಲ್ಲೂಕು : ಹೊಸದುರ್ಗ
ಗ್ರಾಮ : ಹೊಸದುರ್ಗ ಪಟ್ಟಣ ಪಂಚಾಯ್ತಿ

**ಸ್ಥಿರ ಸೊತ್ತುಗಳ ವಿವರ (ಚಕ್ಕುಬಂದಿ):**

ಪೂರ್ವಕ್ಕೆ : ಟೌನ್ ಪಂಚಾಯ್ತಿ ಬಾಕ್ಸ್ ಡ್ರೈನೇಜ್
ಪಶ್ಚಿಮಕ್ಕೆ : ದೋಬಿ ಚನ್ನಪ್ಪನ ಮನೆ
ಉತ್ತರಕ್ಕೆ : ಟೌನ್ ಪಂಚಾಯ್ತಿ ರಸ್ತೆ
ದಕ್ಷಿಣಕ್ಕೆ : ಓಣಿ
ಖಾತೆ ನಂ : 292 / 290 / 237 / ಎ
ವಿಸ್ತೀರ್ಣ : 15 X 40 ಅಡಿಗಳು ಮತ್ತು 15 X 20 ಅಡಿಗಳ ಲಗತ್ತು ಜಾಗ
ಹೆಸರು : ಜಿ. ಲಕ್ಷ್ಮೀದೇವಿ
ಮಾರಾಟದ ಬೆಲೆ : 85,000-00
(ಪ್ರತಿ ಲಾಟ್‌ಗೆ) : (ಎಂಭತ್ತೈದು ಸಾವಿರ ಮಾತ್ರ)
ಹರಾಜು ದಿನಾಂಕ : 23.11.2005

ನನ್ನ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ: 10.1.2006ರಲ್ಲಿ ನೀಡಲ್ಪಟ್ಟಿದೆ.

ಸ್ಥಳ: ಚಿತ್ರದುರ್ಗ
ದಿನಾಂಕ:10.01.2006

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ.

**ಫಾರಂ ನಂ. 11**

**(38ನೇ ರೂಲಿನ (7) ನೆಯ ಕಲಂ)**

**ಸ್ಥಿರ ಸೊತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು ಹೊಸದುರ್ಗ ಟೌನ್ ವಿನಾಯಕ ಬಡಾವಣೆಯಲ್ಲಿರುವ ಶ್ರೀಮತಿ ಸಿ. ರತ್ನಮ್ಮ ಕೋಂ ಹರಳರಾಜ್ ಇವರು ಈ ಕೆಳಗೆ ತೋರಿಸಿದ ಸ್ಥಿರ ಸೊತ್ತುಗಳನ್ನು ಬಹಿರಂಗವಾಗಿ ಹರಾಜಿನಲ್ಲಿ 2005ನೇ ಇಸವಿ ನವೆಂಬರ್ ತಿಂಗಳ 23ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗ್ಯೂ ಮತ್ತು ದರಖಾಸ್ತು ಹಣ ರೂ. 85,000/- (ಎಂಭತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಶ್ರೀಮತಿ ಸಿ. ರತ್ನಮ್ಮ ಕೋಂ ಹರಳರಾಜ್ ಇವರು ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗಿರುತ್ತದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸೊತ್ತುಗಳ ವಿವರ | ವಿವರ | | | ಷರಾ |
|---|---|---|---|---|---|
| | | ಪೋಡು ನಂ. | ಖಾತೆದಾರರ ಹೆಸರು | ಅಂದಾಜು ವಿಸ್ತೀರ್ಣ | |
| ಹೊಸದುರ್ಗ ಟೌನ್ | ಖಾಲಿ ನಿವೇಶನ | 292 / 290 / 237/ಎ | ಜಿ. ಲಕ್ಷ್ಮೀದೇವಿ | 15 X 40 ಅಡಿ<br>15 X 20 ಅಡಿ<br>ಲಗತ್ತು ಜಾಗ | |

ಸ್ಥಳ: ಚಿತ್ರದುರ್ಗ
ದಿನಾಂಕ:10.01.2006
ಪಿ.ಆರ್. 111

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ-ವಿಭಾಗ, ಚಿತ್ರದುರ್ಗ.

**ಸೂಚನೆ:** ಮಾರಾಟ ಮಾಡಲ್ಪಟ್ಟ ಸ್ಥಿರ ಸೊತ್ತುಗಳು ಇರುವ ಗ್ರಾಮಗಳಲ್ಲಿಯೂ ಜಿಲ್ಲಾ ಗೆಜೆಟ್‌ನಲ್ಲಿಯೂ ಈ ಇಸ್ತಿಹಾರ್ ಪ್ರಕಟಿಸತಕ್ಕದ್ದು.

**ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಕೈಮಗ್ಗ ಮತ್ತು ಜವಳಿ ಇಲಾಖೆ, ಇವರ ನಡವಳಿಗಳು**

**ಸಂ.ಕೈಜಇ/ಜಂ.ರಿ./ಜತ/ರಾಸನೂಗಿ/118/2005-06, ದಿನಾಂಕ: 9ನೇ ಜನವರಿ 2006**

**ವಿಷಯ:** ರಾಯಚೂರು ಸಹಕಾರಿ ನೂಲಿನ ಗಿರಣಿ ನಿ., ರಾಯಚೂರು ಇದನ್ನು ಸಮಾಪನೆಗೊಳಿಸಿ ಸಮಾಪಕರನ್ನು ನೇಮಿಸುವ ಕುರಿತು.

**ಉಲ್ಲೇಖ:**
1. ಸರ್ಕಾರದ ಪತ್ರ ಸಂಖ್ಯೆ: ಸಿಡಿ 41 ಸಿಐಎಂ 2005, ದಿ: 25.10.2005.
2. ಈ ಕಚೇರಿಯ ಸಮ ಸಂಖ್ಯೆಯ ಪತ್ರ ದಿನಾಂಕ 28.10.2005.
3. ಸರ್ಕಾರದ ಅಧಿಸೂಚನೆ ಸಂ.ಸಇ/ಎಸಸೇ/2004 ದಿನಾಂಕ 5.12.2005.
4. ಸರ್ಕಾರದ ಆದೇಶ ಸಂ.ಸ ಇ/41/ಸಿಐಎಂ/2005 ಬೆಂಗಳೂರು ದಿನಾಂಕ 4.1.2006.
5. ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ಇವರ ಟಿಪ್ಪಣಿ ಸಂ.ಸಿಎಂ/ಹೆಚ್‌ಓ/77/2006 ದಿನಾಂಕ 6.1.2006.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 77 (2) ಮತ್ತು ಸರ್ಕಾರಿ ಆದೇಶ ಸಂ.ಸಿಎಂಡಬ್ಲ್ಯು/69/ಸಿಎಲ್‌ಎಂ/2001 ದಿನಾಂಕ: 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ.ರಾಮಿರೆಡ್ಡಿ, ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು-1, ಆದ ನಾನು ಉಲ್ಲೇಖ (1)ರ ಪತ್ರದನ್ವಯ ರಾಯಚೂರು ಸಹಕಾರಿ ನೂಲಿನ ಗಿರಣಿ ನಿ, ರಾಯಚೂರು, ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 (1)ರಲ್ಲಿ ದತ್ತವಾಗಿರುವ ಅನ್ವಯ ಸಹಕಾರಿ ಸಂಘಗಳ ಉಪ ನಿಬಂಧಕರು, ರಾಯಚೂರು ಇವರನ್ನು ಸದರಿ ಗಿರಣಿಯ ಸಮಾಪಕರನ್ನಾಗಿ ಉಲ್ಲೇಖ (2)ರ ಪತ್ರದಲ್ಲಿ ನೇಮಿಸಿ ಆದೇಶ ಹೊರಡಿಸಲಾಗಿತ್ತು,.

ಆದರೆ ಸದರಿಯವರು ಉಲ್ಲೇಖ (3)ರ ಪತ್ರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರ ಹುದ್ದೆಯಿಂದ ಸಹಕಾರ ಸಂಘಗಳ ಜಂಟಿ ನಿಬಂಧಕರ ಹುದ್ದೆಗೆ ಪದೋನ್ನತಿ ಹೊಂದಿರುತ್ತಾರೆ. ಉಲ್ಲೇಖ (4)ರಲ್ಲಿ ಈಗಾಗಲೇ ಸರ್ಕಾರವು ಗಿರಣಿಯ ಆಸ್ತಿಯನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಲು ಹಾಗೂ ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಅನುಮತಿ ನೀಡಿದೆ.

ಉಲ್ಲೇಖ (5)ರಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ಇವರ ಟಿಪ್ಪಣಿ ಸಂ.ಸಿಎಂ/ಹೆಚ್ಒ/77/2006 ದಿನಾಂಕ 6.1.2006 ರಲ್ಲಿ ಶ್ರೀ ವೈ.ಎಸ್. ದೇವದಾಸರ, ಜಂಟಿ ನಿಬಂಧಕರು, ಇವರನ್ನು ರಾಯಚೂರು ಸಹಕಾರಿ ನೂಲಿನ ಗಿರಣಿಯ ಸಮಾಪನಾಧಿಕಾರಿಯನ್ನಾಗಿ ನೇಮಕಾತಿ ಮಾಡುವಂತೆ ನಿರ್ದೇಶಿಸಿರುತ್ತಾರೆ. ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಗಿರಣಿಯ ಆಸ್ತಿಯನ್ನು ಶೀಘ್ರ ವಿಲೇವಾರಿ ಮಾಡಲು ಹಿಂದಿನ ಉಲ್ಲೇಖ (2)ರ ಆದೇಶವನ್ನು ಮಾರ್ಪಾಡು ಮಾಡಿ ಸದರಿಯವರನ್ನೇ ಅಂದರೆ ಶ್ರೀ ವೈ. ದೇವದಾಸರ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ರಾಯಚೂರು ಇವರನ್ನು ರಾಯಚೂರು ಸಹಕಾರಿ ನೂಲಿನ ಗಿರಣಿ ನಿ, ರಾಯಚೂರು, ಇದರ ಸಮಾಪನಾಧಿಕಾರಿಯಾಗಿ ಮುಂದುವರಿಯುವಂತೆ ನೇಮಿಸಿರುತ್ತೇನೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ಈ ದಿನ ಅಂದರೆ 9.1.2006 ರಂದು ಹೊರಡಿಸಿರುತ್ತೇನೆ.

ಪಿ.ಆರ್. 112 ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ).

## ಕರ್ನಾಟಕ ಲೋಕಸೇವಾ ಆಯೋಗ

## ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು

### ಅಧಿಸೂಚನೆ ಸಂಖ್ಯೆ:ಆಡಳಿತ/1392/2005-06/ಪಿಎಸ್‌ಸಿ, ದಿನಾಂಕ: 11ನೇ ಅಕ್ಟೋಬರ್ 2005

2005ರ ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ (ಕೇಂದ್ರ ಕಾಯಿದೆ 2005ರ - ಸಂಖ್ಯೆ22) ಪರಿಚ್ಛೇದ 5(1) ಹಾಗೂ 19(1) ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಯೋಗಕ್ಕೆ ಸಂಬಂಧಿಸಿದಂತೆ ಕೆಳಕಂಡ "ಸಾರ್ವಜನಿಕ ಮಾಹಿತಿ ಅಧಿಕಾರಿ" ಮತ್ತು "ಪ್ರಥಮ ಮೇಲ್ಮನವಿ ಪ್ರಾಧಿಕಾರ" ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಿ ನೇಮಕ ಮಾಡಿದೆ.

**ಸಾರ್ವಜನಿಕ ಪ್ರಾಧಿಕಾರ: ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು-1**

| ಶಾಖೆಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಪ್ರಥಮ ಮೇಲ್ಮನವಿ ಪ್ರಾಧಿಕಾರ |
|---|---|---|
| 1. ಆಡಳಿತ ಶಾಖೆ | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 2. ಲೆಕ್ಕ ಶಾಖೆ | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 3. ಇಲಾಖಾ ಪರೀಕ್ಷಾ ಶಾಖೆ-1 | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 4. ಇಲಾಖಾ ಪರೀಕ್ಷಾ ಶಾಖೆ-2 | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 5. ಪರೀಕ್ಷಾ ಶಾಖೆ-1 | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 6. ಪರೀಕ್ಷಾ ಶಾಖೆ-2 | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 7. ಪರೀಕ್ಷಾ ಶಾಖೆ-3 | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 8. ತೀರುವಳಿ ಶಾಖೆ | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 9. ನೇಮಕಾತಿ ಶಾಖೆ-1 | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 10. ನೇಮಕಾತಿ ಶಾಖೆ-2 | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 11. ಸಮಾಲೋಚನಾ ಶಾಖೆ | ಸಹಾಯಕ ಕಾರ್ಯದರ್ಶಿ | ಉಪಕಾರ್ಯದರ್ಶಿ |
| 12. ಕಾನೂನು ಕೋಶ | ಶಾಖಾಧಿಕಾರಿ | ಕಾನೂನು ಕೋಶದ ಮುಖ್ಯಸ್ಥರು |
| 13. ಗೋಪ್ಯ ಶಾಖೆ | ಶಾಖಾಧಿಕಾರಿ | ಕಾರ್ಯದರ್ಶಿ |
| 14. ರಹಸ್ಯ ಶಾಖೆ | ಉಪಕಾರ್ಯದರ್ಶಿ | ಕಾರ್ಯದರ್ಶಿ |
| 15. ಗಣಕ ಕೇಂದ್ರ | ಸೀನಿಯರ್ ಪ್ರೋಗ್ರಾಮರ್ | ಸಿಸ್ಟಂ ಅನಾಲಿಸ್ಟ್ |
| 16. ಪ್ರಾಂತೀಯ ಕಛೇರಿ, ಬೆಳಗಾವಿ | ಸಹಾಯಕ ಕಾರ್ಯದರ್ಶಿ, ಪ್ರಾಂತೀಯ ಕಛೇರಿ, ಬೆಳಗಾವಿ | ಉಪಕಾರ್ಯದರ್ಶಿ (ಆಡಳಿತ) ಕೇಂದ್ರ ಕಛೇರಿ |
| 17. ಪ್ರಾಂತೀಯ ಕಛೇರಿ, ಗುಲ್ಬರ್ಗಾ | ಸಹಾಯಕ ಕಾರ್ಯದರ್ಶಿ, ಪ್ರಾಂತೀಯ ಕಛೇರಿ, ಗುಲ್ಬರ್ಗಾ | ಉಪಕಾರ್ಯದರ್ಶಿ (ಆಡಳಿತ) ಕೇಂದ್ರ ಕಛೇರಿ |
| 18. ಪ್ರಾಂತೀಯ ಕಛೇರಿ, ಮೈಸೂರು | ಸಹಾಯಕ ಕಾರ್ಯದರ್ಶಿ, ಪ್ರಾಂತೀಯ ಕಛೇರಿ, ಮೈಸೂರು | ಉಪಕಾರ್ಯದರ್ಶಿ (ಆಡಳಿತ) ಕೇಂದ್ರ ಕಛೇರಿ |

ಆಯೋಗದ ಆದೇಶದ ಮೇರೆಗೆ,

**ಬಿ.ಎಸ್. ರಾಮಪ್ರಸಾದ್**

ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ

## KARNATAKA PUBLIC SERVICE COMMISSION

## Office of the Public Service Commission, "Park House", Bangalore

## NOTIFICATION

### No. ADM. 1392/2005-06/PSC, Bangalore, Dated: 11th October 2005

In exercise of the powers conferred under Sections 5(1) and 19(1) of the "Right to Information Act, 2005" (Central Act-2005 No.22) the following officers of the Commission are designated and appointed as "Public Information Officer" and "First Appellate Authority" as far as it relates to the Commission.

**Public Authority:KARNATAKA PUBLIC SERVICE COMMISSION, BANGALORE-1**

| Sections | Public Information Officer | First Appellate Authority |
|---|---|---|
| 1. Administration Branch | Assistant Secretary | Deputy Secretary |
| 2. Accounts Section | Assistant Secretary | Deputy Secretary |
| 3. Departmental Examination Branch-1 | Assistant Secretary | Deputy Secretary |
| 4. Departmental Examination Branch-2 | Assistant Secretary | Deputy Secretary |
| 5. Examination Branch-1 | Assistant Secretary | Deputy Secretary |
| 6. Examination Branch-2 | Assistant Secretary | Deputy Secretary |
| 7. Examination Branch-3 | Assistant Secretary | Deputy Secretary |
| 8. Clearance Branch | Assistant Secretary | Deputy Secretary |
| 9. Recruitment Branch-1 | Assistant Secretary | Deputy Secretary |
| 10. Recruitment Branch-2 | Assistant Secretary | Deputy Secretary |
| 11. Consultation Branch | Assistant Secretary | Deputy Secretary |
| 12. Legal Cell | Section Officer | Head of Legal Cell |
| 13. Confidential Branch | Section Officer | Secretary |
| 14. RHS | Deputy Secretary | Secretary |
| 15. Computer Centre | Senior Programmer | System Analyst |
| 16. Regional Office, Belgaum | Assistant Secretary, Regional Office, Belgaum | Deputy Secretary (Admn.) Head Office |
| 17. Regional Office, Gulbarga | Assistant Secretary, Regional Office, Gulbarga | Deputy Secretary (Admn.) Head Office |
| 18. Regional Office, Mysore | Assistant Secretary, Regional Office, Mysore | Deputy Secretary (Admn.) Head Office |

By Order of the Commission

P.R. 99

**B.S. RAMAPRASAD**

Secretary, Karnataka Public Service Commission.

**ಕರ್ನಾಟಕ ಲೋಕಸೇವಾ ಆಯೋಗ**

**ವಿಷಯ:** 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆ ನಡೆಯುವ ಸಮಯದಲ್ಲಿ ದುರ್ನಡತೆ ಬಗ್ಗೆ.

**ಓದಲಾಗಿದೆ:**

1. 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಎನ್.ಎಂ. ನಟರಾಜ್ ಇವರ ಅರ್ಜಿ ದಿನಾಂಕ:16.4.2005.
2. ಶ್ರೀ ಎನ್.ಎಂ. ನಟರಾಜ್ ಇವರಿಗೆ ಜಾರಿ ಮಾಡಿದ ಕಾರಣ ಕೇಳುವ ನೋಟೀಸು ಸಂಖ್ಯೆ:ಇಪ(1) 1421-22/2005-06/ಪಿಎಸ್‌ಸಿ ದಿನಾಂಕ: 22.7.2005.
3. ಶ್ರೀ ಎನ್.ಎಂ. ನಟರಾಜ್ ಇವರ ದಿನಾಂಕ: 28.7.2005ರ ಹೇಳಿಕೆ.
4. ಶ್ರೀ ಎನ್.ಎಂ. ನಟರಾಜ್, ಇವರು ಎಸಗಿದ ದುರ್ನಡತೆ ಕುರಿತು ಹೆಚ್ಚಿನ ವಿಚಾರಣೆ ನಡೆಸಲು ಶ್ರೀ ಎಂ.ಎಸ್. ಸತ್ಯಪ್ರಕಾಶ್, ಶಾಖಾಧಿಕಾರಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವ ಆದೇಶ ಸಂಖ್ಯೆ: ಆಡಳಿತ 1190/2005-06/ಪಿಎಸ್‌ಸಿ ದಿನಾಂಕ: 5.9.2005.
5. ಶ್ರೀ ಎನ್.ಎಂ. ನಟರಾಜ್ ರವರಿಗೆ ವಿಚಾರಣಾಧಿಕಾರಿಯವರ ಮುಂದೆ ವಿಚಾರಣೆಗೆ ಹಾಜರಾಗಲು ನೋಟೀಸು ಸಂಖ್ಯೆ:ಇಪ(1)1299/2005-06/ಪಿಎಸ್‌ಸಿ ದಿನಾಂಕ: 19.10.2005.
6. ದಿನಾಂಕ: 28.10.2005ರಂದು ಶ್ರೀ ಎನ್.ಎಂ. ನಟರಾಜ್ ರವರು ವಿಚಾರಣೆ ಸಮಯದಲ್ಲಿನ ಹೇಳಿಕೆ.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗ ನಡೆಸಿರುವ 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಎನ್.ಎಂ. ನಟರಾಜ್, ದ್ವಿತೀಯ ದರ್ಜೆ ಲೆಕ್ಕ ಸಹಾಯಕ, ಜಿಲ್ಲಾ ಪಂಚಾಯತ್ ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ ರಾಯಚೂರು-584101 ಇವರ ನೋಂದಣಿ ಸಂಖ್ಯೆ 38665ರಡಿ ಪುಸ್ತಕಗಳನ್ನು ನೋಡಿಕೊಳ್ಳದೆ ಬರೆಯಬೇಕಾಗಿರುವ ಎಸ್.ಎ.ಎಸ್. ಭಾಗ-1, ಪತ್ರಿಕೆ-2ಕ್ಕೆ ದಿನಾಂಕ:23.5.2005ರ ಅಪರಾಹ್ನ ಗುಲ್ಬರ್ಗಾ ಪರೀಕ್ಷಾ ಕೇಂದ್ರದಲ್ಲಿ ಹಾಜರಾಗಿದ್ದು, ಪರೀಕ್ಷಾ ವೇಳೆಯಲ್ಲಿ ಪರೀಕ್ಷಾ ಕೊಠಡಿಯ ಸಂವೀಕ್ಷಕರು ತಪಾಸಣೆ ಮಾಡುವ ಸಮಯದಲ್ಲಿ "ದಿ ಕರ್ನಾಟಕ ಮುನ್ಸಿಪಾಲಿಟೀಸ್ 1964" ಪುಸ್ತಕವನ್ನು ನೋಡಿಕೊಂಡು ನಕಲು ಮಾಡುತ್ತಿದ್ದುದನ್ನು (ಪರೀಕ್ಷಾ ಕೇಂದ್ರದ ಅಪರ ಪರಿವೀಕ್ಷಕರು) ಗಮನಿಸಿ ಅವರಿಂದ ಸದರಿ ಪುಸ್ತಕವನ್ನು ಹಾಗೂ ಉತ್ತರ ಪತ್ರಿಕೆಗಳನ್ನು ವಶಪಡಿಸಿಕೊಂಡು ನಂತರ ಅವರಿಂದ ಲಿಖಿತ ಹೇಳಿಕೆ ಪಡೆದು ಆಯೋಗಕ್ಕೆ ವರದಿ ಸಲ್ಲಿಸಿರುತ್ತಾರೆ.

ಇಲಾಖಾ ಪರೀಕ್ಷೆಗಳನ್ನು ಬರೆಯಲು ಅಭ್ಯರ್ಥಿಗಳಿಗೆ ನೀಡಿದ ಪ್ರವೇಶ ಪತ್ರಗಳ ಹಿಂಬದಿಯಲ್ಲಿ ಮುದ್ರಿಸಿರುವ "ಅಭ್ಯರ್ಥಿಗಳಿಗೆ ಸೂಚನೆಗಳು" ಇದರಲ್ಲಿ ಇತರೆ ಸೂಚನೆಗಳೊಂದಿಗೆ ಪರೀಕ್ಷಾ ಕೊಠಡಿಯಲ್ಲಿ ಅನಧಿಕೃತ ಪುಸ್ತಕಗಳನ್ನು ಟಿಪ್ಪಣಿಗಳು, ಚೀಟಿಗಳು, ಇತ್ಯಾದಿಗಳನ್ನು

ತರುವುದು ನಿಷೇಧಿಸಲಾಗಿದೆಯೆಂದು ತಿಳಿಸಿದ್ದರೂ ಸಹ, ಆ ಸೂಚನೆಗಳನ್ನು ಶ್ರೀ ಎನ್.ಎಂ. ನಟರಾಜ್ ಇವರು ಮೇಲೆ ವಿವರಿಸಿರುವಂತೆ ಉಲ್ಲಂಘಿಸಿ, ದುರಾಚಾರ ಎಸಗಿರುತ್ತಾರೆ. ಆದಕಾರಣ, ಪರೀಕ್ಷಾ ಕೇಂದ್ರದ ಮುಖ್ಯ ಪರಿವೀಕ್ಷಕರು ಆಯೋಗಕ್ಕೆ ಸಲ್ಲಿಸಿದ ವರದಿ ಮತ್ತು ಸಂಬಂಧಿಸಿದ ದಾಖಲೆಗಳನ್ನು ಆಧರಿಸಿ ಸದರಿ ಅಭ್ಯರ್ಥಿಗೆ ಮೇಲೆ (2)ರಲ್ಲಿ ಓದಲಾಗಿರುವ ಕಾರಣ ಕೇಳುವ ನೋಟೀಸನ್ನು ಜಾರಿಮಾಡಿ ಅದರಲ್ಲಿ ತಿಳಿಸಿರುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು. ಶ್ರೀ ನಟರಾಜ್ ಇವರು ಕಾರಣಕೇಳುವ ನೋಟೀಸನ್ನು ಸ್ವೀಕರಿಸಿದ್ದು ಮೇಲೆ (3)ರಲ್ಲಿ ಓದಲಾಗಿರುವ ಅವರ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆಪಾದನೆಗಳನ್ನು ಅಲ್ಲಗಳೆದಿರುತ್ತಾರೆ. ಆಪಾದನೆಗಳನ್ನು ಅಲ್ಲಗಳೆದಿರುವುದರಿಂದ ಆಯೋಗವು ಇವರ ವಿರುದ್ಧ ವಿಚಾರಣೆ ನಡೆಸಲು ತೀರ್ಮಾನಿಸಿ ಶ್ರೀ ಎಂ.ಎಸ್. ಸತ್ಯಪ್ರಕಾಶ್, ಶಾಖಾಧಿಕಾರಿರವರನ್ನು ಮೇಲೆ (4) ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನಿಯೋಜಿಸಲಾಗಿತ್ತು.

ಆಯೋಗದ ಆದೇಶದಂತೆ ವಿಚಾರಣಾಧಿಕಾರಿಗಳು ಅಭ್ಯರ್ಥಿಗೆ ಮೇಲೆ (5)ರಲ್ಲಿ ಓದಲಾದ ನೋಟೀಸನ್ನು ಜಾರಿ ಮಾಡಿ ವಿಚಾರಣಾಧಿಕಾರಿಗಳ ಮುಂದೆ ದಿನಾಂಕ:17.10.2005 ರಂದು ಹಾಜರಾಗುವಂತೆ ಸೂಚಿಸಲಾಗಿತ್ತು. ಸದರಿ ಅಭ್ಯರ್ಥಿಯು ಸದರಿ ನೋಟೀಸನ್ನು ಸ್ವೀಕರಿಸಿದ್ದರೂ ಸಹ ವಿಚಾರಣಾಧಿಕಾರಿಯವರ ಮುಂದೆ ಹಾಜರಾಗಲಿಲ್ಲ. ಅಂತಿಮವಾಗಿ ದಿನಾಂಕ: 19.10.2005 ರಂದು ಮತ್ತೊಂದು ನೋಟೀಸನ್ನು ಜಾರಿ ಮಾಡಿ ದಿನಾಂಕ:28.10.2005 ರಂದು ಹಾಜರಾಗುವಂತೆ ಸೂಚಿಸಿದ್ದು, ತಪ್ಪಿದ್ದಲ್ಲಿ ಸೂಕ್ತಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿತ್ತು.

ಅಭ್ಯರ್ಥಿಯು ದಿನಾಂಕ: 28.10.2005ರಂದು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿ ಮೇಲೆ (6)ರಲ್ಲಿ ಓದಲಾದ ವಿಚಾರಣಾ ವರದಿ ವಿಚಾರಣೆ ಸಮಯದಲ್ಲಿ ಆರೋಪಿಯು ನೀಡಿರುವ ಹೇಳಿಕೆಗಳನ್ನು ಅವಲೋಕಿಸಿದಾಗ ಆರೋಪಿಯು ತಾವು ಎಸಗಿರುವುದು ನಿಸ್ಸಂದೇಹವಾಗಿ ಸಾಬೀತಾಗಿ ಎಂದು ವರದಿಯಲ್ಲಿ ಹೇಳಿರುತ್ತಾರೆ. ಈ ವರದಿಯನ್ನು ಆಧರಿಸಿ ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಆಯೋಗವು ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965 ಅನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಕೆಳಕಂಡಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ:ಇಪ(1)2344/2005-06/ಪಿಎಸ್‌ಸಿ, ದಿನಾಂಕ: 10ನೇ ಜನವರಿ 2006**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) ನಿಯಮಗಳ 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ: ಆಡಳಿತ 398/93-94/ಪಿಎಸ್‌ಸಿ ದಿನಾಂಕ: 14.9.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಎನ್.ಎಂ. ನಟರಾಜ್ ದ್ವಿ.ದ.ಲೆಕ್ಕ ಸಹಾಯಕ, ಜಿಲ್ಲಾ ಪಂಚಾಯತ್ ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ ರಾಯಚೂರು-584101 ಇವರಿಗೆ 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್. 90

ಕಾರ್ಯದರ್ಶಿ ಹಾಗೂ ನಿಯಂತ್ರಕರು ಇಲಾಖಾ ಪರೀಕ್ಷೆಗಳು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ನಂ.ಎಲ್.ಎನ್.ಡಿ(ಎನ್) ಸಿ.ಆರ್.52/03-04, ದಿನಾಂಕ: 2ನೇ ಜನವರಿ 2006**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಹೆಗ್ಗಡದೇವನಪುರ ಗ್ರಾಮದ ಸರ್ಕಾರಿ ಓಣಿಯನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ:ಆರ್.ಡಿ. 147 ಎಲ್.ಜಿ.ಬಿ. 2005, ದಿನಾಂಕ: 9.11.2005.
2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್.ಎನ್.ಡಿ:ಸಿ.ಆರ್:94/01-02, 281/03-04, ದಿನಾಂಕ: 24.11.2004.

ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಹೆಗ್ಗಡದೇವನಪುರ ಗ್ರಾಮದ ಸರ್ಕಾರಿ ಓಣಿ (ಕಾಲು ದಾರಿ ಬಂಡಿದಾರಿ) ಹೊಂದಿರುವ ಜಮೀನಿನಲ್ಲಿ ಸ್ಮಶಾನಕ್ಕಾಗಿ ಕಾಯ್ದಿರಿಸಲು ಹೆಗ್ಗಡದೇವನಪುರ ಗ್ರಾಮಸ್ಥರು ಮನವಿ ಸಲ್ಲಿಸಿರುತ್ತಾರೆ.

ಸದರಿ ಮನವಿಯ ಬಗ್ಗೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕುರವರು ಸದರಿ ಜಾಗವು ಓಣಿ ಜಾಗವಾಗಿದ್ದು ಕರ್ನಾಟಕ ಭೂ ಕಂದಾಯ ಕಾಯಿದೆ 71ರ ಪ್ರಕಾರ ಕಾಯ್ದಿರಿಸುವ ಬಗ್ಗೆ ಬಂಡಿ ದಾರಿಯ ಮೇಲಿನ ಎಲ್ಲಾ ಸಾರ್ವಜನಿಕ ಹಕ್ಕುಗಳನ್ನು ಕರ್ನಾಟಕ ಭೂ ಕಂದಾಯಕಾಯ್ದೆ ಕಲಂ 68 (1)ರ ಪ್ರಕಾರ ದಿನಾಂಕ:11.3.2004 ರಂದು ನಮೂನೆ 27 ರಲ್ಲಿ ಹೊರಡಿಸಿದ್ದು ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ ಎಂದು ತಹಶೀಲ್ದಾರ್‌ರವರು ವರದಿ ಮಾಡಿರುತ್ತಾರೆ. ಮತ್ತು ಹೆಗ್ಗಡದೇವನಪುರ ಗ್ರಾಮದ ಚಕ್ಕುಬಂದಿಯುಳ್ಳ ಪೂರ್ವಕ್ಕೆ ಸರ್ಕಾರಿ ಓಣಿ ಉಳಿದ ಜಮೀನು ಪಶ್ಚಿಮಕ್ಕೆ ಸರ್ವೆ ನಂ. 65, ಉತ್ತರಕ್ಕೆ ಸರ್ವೆ ನಂ. 67/3 ಮತ್ತು ದಕ್ಷಿಣಕ್ಕೆ ಸರ್ಕಾರಿ ಓಣಿಯಲ್ಲಿ ದಾರಿಗಾಗಿ ಕಾಯ್ದಿರಿಸಿದ ಜಮೀನು ಮತ್ತು ನಂತರ ಸರ್ವೆನಂಬರ್ 43 ರ ಮಧ್ಯೆ ಇರತಕ್ಕ 2.00 ಎಕರೆ ಜಮೀನು ಸ್ಮಶಾನಕ್ಕಾಗಿ ಮತ್ತು ಈ ಜಮೀನಿನಲ್ಲಿ ಸಾರ್ವಜನಿಕ ಸಂಚಾರಕ್ಕೆ 40 ಅಡಿ ಅಗಲದ ರಸ್ತೆಯನ್ನು ನಕ್ಷೆಯಲ್ಲಿರುವಂತೆ ಕಾಯ್ದಿರಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಉಲ್ಲೇಖ (1)ರ ಸರ್ಕಾರದ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಉಲ್ಲೇಖ (1)ರ ಸರ್ಕಾರದ ಪತ್ರದಲ್ಲಿ ದಾಸನಪುರ ಹೋಬಳಿ, ಹೆಗ್ಗಡದೇವನಪುರ ಗ್ರಾಮದ ನಂಬರ್ ಕಾಣದ ಸರ್ಕಾರಿ ಓಣಿಯ ಸಾರ್ವಜನಿಕ ಹಕ್ಕನ್ನು ವಿರಹಿತಪಡಿಸಲು ಮತ್ತು ನಂಬರ್ ಕಾಣದ ಸರ್ಕಾರಿ ಓಣಿ ಖರಾಬ್ ಜಮೀನಿನಲ್ಲಿ 2.00 ಎಕರೆ ಜಮೀನನ್ನು ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರ ಪ್ರಕಾರ ಕಾಯ್ದಿರಿಸಲು ಮತ್ತು ಸ್ಮಶಾನದ ಉಸ್ತುವಾರಿಯನ್ನು ಸಂಬಂಧಿಸಿದ ಗ್ರಾಮ ಪಂಚಾಯಿತಿಗೆ ವರ್ಗಾಯಿಸಲು ಪೂರ್ವಾನುಮೋದನೆ ನೀಡಲಾಗಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

## ಆದೇಶ

ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಹೆಗ್ಗಡದೇವನಪುರ ಗ್ರಾಮದ ನಂಬರ್ ಕಾಣದ ಸರ್ಕಾರಿ ಓಣಿಯ ಸಾರ್ವಜನಿಕ ಹಕ್ಕನ್ನು ವಿರಹಿತಪಡಿಸಿ ಪೂರ್ವಕ್ಕೆ ಸರ್ಕಾರಿ ಓಣಿಯ ಸಾರ್ವಜನಿಕ ಹಕ್ಕನ್ನು ವಿರಹಿತಪಡಿಸಿ ಪೂರ್ವಕ್ಕೆ ಸರ್ಕಾರಿ ಓಣಿ ಪಶ್ಚಿಮಕ್ಕೆ ಸರ್ವೆ ನಂಬರ್ 65/1, ಉತ್ತರಕ್ಕೆ ಸರ್ವೆ ನಂಬರ್ 67/3 ಮತ್ತು ದಕ್ಷಿಣಕ್ಕೆ ಕಾಯ್ದಿರಿಸಿದ ದಾರಿ ಹಾಗೂ ಸರ್ವೆನಂಬರ್ 43/1, 2, 3, 42/1,2,3ರ ಮಧ್ಯೆ ಇರತಕ್ಕ 2.00 ಎಕರೆ ಜಮೀನನ್ನು ಸ್ಮಶಾನಕ್ಕಾಗಿ ಮತ್ತು ಸಾರ್ವಜನಿಕ ಸಂಚಾರಕ್ಕೆ 40 ಅಡಿ ರಸ್ತೆಯನ್ನು ನಕ್ಷೆಯಲ್ಲಿರುವಂತೆ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರ ಪ್ರಕಾರ ಕಾಯ್ದಿರಿಸಿದೆ ಮತ್ತು ಸದರಿ ಸ್ಮಶಾನದ ಉಸ್ತುವಾರಿಯನ್ನು ಗ್ರಾಮಪಂಚಾಯಿತಿ ದಾಸನಪುರ ರವರಿಗೆ ನೋಡಿಕೊಳ್ಳಲು ಆದೇಶಿಸಿದೆ.

### ಷರತ್ತುಗಳು

1) ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2) ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3) ಗ್ರಾಮ ಪಂಚಾಯಿತಿರವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4) ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.
5) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

ಪಿ.ಆರ್. 114

## ಜಿಲ್ಲಾಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

### ಅಧಿಸೂಚನೆ

**ನಂ: ಆರ್ ಟಿ ಎ ಸಿಆರ್ 84:2005-06, ದಿನಾಂಕ: 2ನೇ ಜನವರಿ 2006**

ಉಡುಪಿ ತಾಲ್ಲೂಕಿನ ಉಡುಪಿ ಕಾರ್ಕಳ ರಾಜ್ಯ ಹೆದ್ದಾರಿಗೆ ಕೂಡುವ ಮಣಿಪಾಲ-ಅಂಬಾಗಿಲು ಕೂಡು ರಸ್ತೆಯು 4.35 ಕಿ.ಮೀ. ಮತ್ತು 5.80 ಕಿ.ಮೀ ಮಧ್ಯ ಮಣಿಪಾಲ ಕೆ ಎಂ ಸಿ ಆವರಣದ ಮಧ್ಯದಿಂದ ಹಾದು ಹೋಗುವ ರಸ್ತೆಯಲ್ಲಿ ಘನ ವಾಹನ ಸಂಚಾರ ನಿಷೇಧಿಸಿ ಪರ್ಯಾಯವಾಗಿ ಹೊಸತಾಗಿ ನಿರ್ಮಿಸಲಾದ ಹಳೇ ರಸ್ತೆಯ ಪಶ್ಚಿಮಕ್ಕೆ ಅಂಬಾಗಿಲು-ಮಣಿಪಾಲ ರಸ್ತೆ ರಾಜ್ಯ ಹೆದ್ದಾರಿಗೆ ಕೂಡು ರಸ್ತೆಯಾಗಿ ರಚಿತವಾದ ರಸ್ತೆಯನ್ನು ವಾಹನ ಸಂಚಾರದ ಬದಲಿ ವ್ಯವಸ್ಥೆಗೆ ಅನುಮತಿ ನೀಡಿ ದ.ಕ.ಜಿಲ್ಲಾ ದಂಡಾಧಿಕಾರಿಯವರು ದಿನಾಂಕ 30.9.1991 ರಂದು ಆರ್ ಟಿ ಎ ಸಿಆರ್ 299: 88.89 ರಂತೆ ಅಧಿಸೂಚನೆ ಹೊರಡಿಸಲಾಗಿದ್ದು, ಸದರಿ ಅಧಿಸೂಚನೆ ಜಾರಿಯಲ್ಲಿರುವಂತೆ ಮಾನ್ಯ ಉಪಕುಲಪತಿಗಳು, ಮಾಹೆ ವಿದ್ಯಾಲಯ, ಮಣಿಪಾಲರವರು ಈ ಹಿಂದೆ ದ.ಕ.ಜಿಲ್ಲಾಧಿಕಾರಿಯವರು ಹೊರಡಿಸಿದ ಅಧಿಸೂಚನೆಯನ್ನು ಮರು ಪರಿಶೀಲಿಸಿ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳ, ಶುಶ್ರೂಷಾ ವಿಭಾಗದಲ್ಲಿ ವ್ಯಾಸಂಗ ಮಾಡುತ್ತಿರುವವರ, ವೈದ್ಯಕೀಯ ಮತ್ತು ತಾಂತ್ರಿಕ ವಿಭಾಗದಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮತ್ತು ಕಸ್ತೂರ್ಬಾ ಆಸ್ಪತ್ರೆಯ ಒಳ ಮತ್ತು ಹೊರ ರೋಗಿಗಳ ಆರೋಗ್ಯದ ಹಿತದೃಷ್ಟಿಯಿಂದ ಕೆ.ಎಂ.ಸಿ. ಆಸ್ಪತ್ರೆ ಮಣಿಪಾಲ ಇದರ ಆವರಣದೊಳಗಿಂದ ಹಾದು ಹೋಗುವ ರಸ್ತೆಯಲ್ಲಿ ಮುಕ್ತವಾಗಿ ಸಾರ್ವಜನಿಕ ಲಘು ವಾಹನಗಳು ಕಾರು, ರಿಕ್ಷಾ, ಮತ್ತು ಮೋಟಾರು ಸೈಕಲ್‌ಗಳು ಸಂಚರಿಸುವುದರಿಂದ ಶಬ್ದ ಮಾಲಿನ್ಯದಿಂದ ವಿದ್ಯಾರ್ಥಿಗಳ ಮತ್ತು ರೋಗಿಗಳ ಶಾಂತಿ ಭಂಗವಾಗುವುದಾಗಿ ಸದ್ರಿ ಕೆ.ಎಂ.ಸಿ. ಆಸ್ಪತ್ರೆ, ಮಣಿಪಾಲ ಇದರ ಆವರಣದೊಳಗಿನಿಂದ ಹಾದು ಹೋಗುವ ರಸ್ತೆಯಲ್ಲಿ ಕೆ.ಎಂ.ಸಿ. ಆಸ್ಪತ್ರೆ, ಮಣಿಪಾಲ ಇವರ ವಿದ್ಯಾಸಂಸ್ಥೆಯ ವಾಹನಗಳ ಸಂಚಾರ ಹೊರತುಪಡಿಸಿ ಉಳಿದ ಸಾರ್ವಜನಿಕ ವಾಹನಗಳು ಕಾರು, ರಿಕ್ಷಾ ಮತ್ತು ಮೋಟಾರು ಸೈಕಲ್‌ಗಳಂತಹ ಲಘುವಾಹನಗಳ ಸಂಚಾರ ನಿಷೇಧಿಸಿ ನಿರ್ಬಂಧಿತ ಮಾರ್ಗವೆಂಬುದಾಗಿ ಹಾಗೂ ಮಾಹೆ ವಿಶ್ವವಿದ್ಯಾಲಯದ ಪರವಾನಿಗೆ / ಅನುಮತಿ ಪಡೆದುಕೊಂಡು ಲಘು ವಾಹನಗಳು ಸಂಚರಿಸಬಹುದಾಗಿ ಅಧಿಸೂಚನೆ ಹೊರಡಿಸಿ ಹಾಗೂ ಸಂಜ್ಞಾಫಲಕ ಹಾಕಲು ಕೋರಿಕೊಂಡಿರುತ್ತಾರೆ.

ಈ ವಿಷಯವಾಗಿ ಉಡುಪಿ ಜಿಲ್ಲಾ ಪೊಲೀಸ್ ಇಲಾಖಾ ಅಧಿಕಾರಿಗಳು ಮತ್ತು ಪ್ರಾದೇಶಿಕ ರಸ್ತೆ ಅಧಿಕಾರಿಯವರು ಉಡುಪಿ ಇವರಿಂದ ಪರಿಶೀಲಿಸಿ ಸದರಿ ರಸ್ತೆಯು ಖಾಸಗೀ ಯಾ ಸಾರ್ವಜನಿಕ ರಸ್ತೆ ಎಂಬುದಾಗಿ ಕಂದಾಯ ಇಲಾಖಾ ರೆಕಾರ್ಡ್ ಮತ್ತು ಸ್ವಾಧೀನತೆಯ ಬಗ್ಗೆ ದಾಖಲಾತಿಗಳನ್ನು ಪರಿಶೀಲಿಸಲು ತಿಳಿಸಿದ್ದು ಖಾಸಗಿ ಎಂದು ಕಂಡು ಬಂದರೂ ಮಾಹೆಗೆ ತೊಂದರೆ ಆದಲ್ಲಿ ಹಾಗೂ ಮಾಹೆಯ ಹಿತದೃಷ್ಟಿಯಿಂದ ನಿರ್ಬಂಧನಾ ಆದೇಶ ಹೊರಡಿಸಿ ಸಂಜ್ಞಾಫಲಕ ಅಳವಡಿಸಬಹುದಾಗಿ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ಈ ಎಲ್ಲಾ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಪರಿಶೀಲಿಸಿದ್ದು, ಮಾಹೆ ವಿಶ್ವವಿದ್ಯಾಲಯದ ವೈದ್ಯಕೀಯ, ತಾಂತ್ರಿಕ, ಶುಶ್ರೂಷಾ ವಿಭಾಗದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಹಾಗೂ ದೂರ ದೂರ ಜಿಲ್ಲೆಗಳಿಂದ ಕಸ್ತೂರ್ಬಾ ಆಸ್ಪತ್ರೆಯಲ್ಲಿ ಶುಶ್ರೂಷೆ ಪಡೆಯಲು ಬಂದ ಒಳ ಮತ್ತು ಹೊರ ರೋಗಿಗಳ ಆರೋಗ್ಯದ ದೃಷ್ಟಿಯಿಂದ ಈ ರಸ್ತೆಯಲ್ಲಿ ಮುಕ್ತ ಲಘುವಾಹನಗಳು ಕಾರು, ರಿಕ್ಷಾ ಮೋಟಾರ್ ಸೈಕಲ್‌ಗಳ ಸಂಚಾರದಿಂದ ಶಬ್ದ ಮಾಲಿನ್ಯದಿಂದಾಗಿ ಆಸ್ಪತ್ರೆಯ ಶಾಂತ ವಾತಾವರಣ ಭಂಗವಾಗುವುದನ್ನು ಗಮನಿಸಿ, ಕೆ ಎಂ ಸಿ ಆಸ್ಪತ್ರೆ, ಮಣಿಪಾಲ ಇದರ ಆವರಣದೊಳಗಿಂದ ಹಾದುಹೋಗುವ ರಸ್ತೆಯಲ್ಲಿ ಮಾಹೆ ವಿದ್ಯಾಸಂಸ್ಥೆಗೆ ಸಂಬಂಧಿಸಿದ ವಾಹನ ಸಂಚಾರ ಹೊರತುಪಡಿಸಿ ಸುವ್ಯವಸ್ಥೆ ಮತ್ತು ಸಾರ್ವಜನಿಕ ಆರೋಗ್ಯದ ಹಿತದೃಷ್ಟಿಯಿಂದ ಈ ರಸ್ತೆಯಲ್ಲಿ ಲಘುವಾಹನ ಸಂಚಾರ ನಿಷೇಧಿಸುವುದು ಅವಶ್ಯವೆಂದು ಮನಗಂಡು ಶ್ರೀ ಟಿ. ಶಾಮ್ ಭಟ್, ಭಾ.ಆ.ಸೇ. ಜಿಲ್ಲಾ ದಂಡಾಧಿಕಾರಿ, ಉಡುಪಿ ಜಿಲ್ಲೆ ಆದ ನಾನು ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 115 ಮತ್ತು ಕರ್ನಾಟಕ ಮೋಟಾರ್ ವೆಹಿಕಲ್ 1989 ನಿಯಮಾವಳಿ 221ಎ(5) (ಎರಡನೇ ತಿದ್ದುಪಡಿ ನಿಯಮ 1990)ರ ಪ್ರಕಾರ ಮುಕ್ತವಾಗಿ ಸಂಚರಿಸುವ (ಲಘುವಾಹನ) ಕಾರು ರಿಕ್ಷಾ, ಮೋಟಾರು ಸೈಕಲು ಸಾರ್ವಜನಿಕ ವಾಹನ ಸಂಚಾರವನ್ನು ನಿಷೇಧಿಸಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆದೇಶಿಸಿರುತ್ತೇನೆ. ಹಾಗೂ ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 116 ಮತ್ತು 1889ರ (ಎರಡನೇ ತಿದ್ದುಪಡಿ ನಿಯಮ 1990) ನಿಯಮ 221ಎ (2)ರಂತೆ ಈ ಬಗ್ಗೆ ಅವಶ್ಯವಿರುವ ಸಂಜ್ಞಾ ಸೂಚನಾ ಫಲಕಗಳನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಉಡುಪಿರವರು ಅಳವಡಿಸುವಂತೆ ಅಧಿಕಾರ ನೀಡಿದೆ.

ಮೇಲಿನ ಆದೇಶವು ದಿನಾಂಕ: 2.1.2006 ರಿಂದ ಮುಂದಿನ ಆದೇಶ ಹೊರಡಿಸುವವರೆಗೆ ಜಾರಿಯಲ್ಲಿರುತ್ತದೆ. ಈ ಅಧಿಸೂಚನೆಯನ್ನು ನನ್ನ ಸಹಿ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

ಜಿಲ್ಲಾ ದಂಡಾಧಿಕಾರಿ, ಹಾಗೂ ಜಿಲ್ಲಾಧಿಕಾರಿ,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 115

**IN THE COURT OF THE CIVIL JUDGE (Jr. Dvn.) & J.M.F.C., KUDLIGI**

**Notice Dated: 1st October, 2005**

It is hereby notified for information of the public that the under mentioned property is pending as un-claimed and now it is to be disposed off according to law.

Therefore, it is hereby proclaimed that any one who has got a claim for the below mentioned property may appear before this Court with in one month from the date of publication and to prefer his or her claim, failing which the property will be confiscated and no claims thereafter will be entertained.

**LIST OF UN-CLAIMED PROPERTY**

| Sl. No. | P.R. No. | Case No. | Description of the property |
|---|---|---|---|
| 1. | 52/04 | C.C. No. 312/04 | One red colour Bajaj M-80 Motor Cycle KA-04/E-4312 |
| 2. | 230/03 | P.F.No. 40/03 | One old TVS Champ Chasis No. F 428997 |

**A. VIJAYAN**

P.R. 116 Civil Judge (Jr. Dvn,) & J.M.F.C., KUDLIGI.

**IN THE COURT OF THE 1 ADDL. CHIEF METROPOLITAN MAGISTRATE, BANGALORE CITY**

It is hereby notified for the information of the public that the under mentioned two wheelers which are in the custody of Kempegowda Nagara Police Station, Bangalore City as unclaimed shall be confiscated to the Government and disposed of according to law if not claimed by the owner with proof of ownership within six months form the date of the publication of this notification.

| Sl. No. | N.C. No. | P.F. No. & Date | Vehicle No. | Nature of Property |
|---|---|---|---|---|
| 1 | Cr. No. 64/02 | 30/2001<br>28.9.2001 | KA-01-ED-701<br>Eng. No. 4-TL-502417<br>C. No. 01-F-4TL-502417 | RX-135<br>Yamaha<br>Merun Colour |
| 2 | 33/2003 | 03/2003<br>18.1.2003 | KA-05-Y-2517<br>Eng. No. 1430216562<br>C. No. 9841L3028552 | RX-100<br>Yamaha<br>Black Colour |
| 3 | 34/2003 | 04/2003<br>18.1.2003 | CAL-4553<br>Eng. 3383 | Bajaj Chetak Pink Colour |
| 4 | 478/2003 | 57/2003<br>23.10.2003 | KA-07-J-1580<br>Eng. No. 7907M-421606<br>C. No. 7907F-372259 | Suzuki<br>Samurai Black<br>Colour |
| 5 | 481/2003 | 58/2003<br>23.10.2003 | CKQ-4065<br>Eng. No. 06-E-559957<br>C. No. 05-C-542913 | Bajaj super<br>Scooter<br>Cement Colour |
| 6 | 483/2003 | 59/2003<br>24.10.2003 | CKI - 3252<br>Eng. No. 06-E-603219<br>C. No. 06-C-509931 | Bajaj Chetak<br>Cement Colour |

By the Court Order

P.R. 117 Sheristedar 1st Additional Chief Metropolitan Magistrate Court, Bangalore City

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ:ಸಿಆರ್-5:2006, ದಿನಾಂಕ: 16ನೇ ಜನವರಿ 2006**

**ಅರ್ಜಿದಾರರು:**

1. ಶ್ರೀಮತಿ ಸುಶೀಲಮ್ಮ ಕೋಂ ದಿ:ರಾಮು
2. ಆರ್. ಅಶೋಕ್ ಬಿನ್ ದಿ:ರಾಮು
3. ಶಾಲಿನಿ ಬಿನ್ ದಿ: ರಾಮು
4. ಉಮಾ ಬಿನ್ ದಿ:ರಾಮು
5. ಶ್ರೀಮತಿ ಸುಂಕಮ್ಮ ಕೋಂ ದಿ:ತಮ್ಮಾಬೋವಿ

ಎಲ್ಲರ ವಾಸ: ಬೋವಿ ಕಾಲೋನಿ, 5ನೇ ಅಡ್ಡರಸ್ತೆ, ಎಡಭಾಗ, ಹೊಸಮನೆ ಬಡಾವಣೆ, ಭದ್ರಾವತಿ.

ವಿರುದ್ಧ

**ಪ್ರತಿವಾದಿಗಳು:**

1. ಮೆ: ಮೋತಿಕಾ ರೋಡ್‌ವೇಸ್ ಪ್ರೈ ಲಿ., ನಂ.36:28, 2ನೇ ಕ್ರಾಸ್, 2ನೇ ಅಂತಸ್ತು, ಮಲ್ಲೇಶ್ವರಂ, ಬೆಂಗಳೂರು-27
2. ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ., ನಂ.32, ಕಮ್ಯುನಿಟಿ ಸೆಂಟರ್, ನ್ಯೂಡೆಲ್ಲಿ-110 023
3. ಶಾಖಾ ವ್ಯವಸ್ಥಾಪಕರು, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಹರ್ಷ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ರಾಮು ರವರು ಪ್ರತಿವಾದಿಯವರಲ್ಲಿ ಚಾಲಕ ಆಗಿ ಕೆಲಸದ ಮೇಲೆ ಇದ್ದಾಗ 27.8.2005 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 4.1.06 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 119

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಪ್ರಕರಣ ಸಂಖ್ಯೆ: ಕಾಪಕ:ಸಿಆರ್-3:2006, ದಿನಾಂಕ: 16ನೇ ಜನವರಿ 2006**

**ಅರ್ಜಿದಾರರು:**
1. ಶ್ರೀಮತಿ ಪ್ರೇಮಾಬಾಯಿ ಕೋಂ ಹಾಲಾನಾಯ್ಕ ಯಾನ್ ಹಾಲಪ್ಪ
2. ತೇಜಸ್ವಿ ಬಿನ್ ಹಾಲಾನಾಯ್ಕ
3. ತನುಜ ಬಿನ್ ಹಾಲಾನಾಯ್ಕ

ವಾಸ: ಕೆಂಚಾಪುರ ಶಿವನಿ ಹೋಬಳಿ, ಭದ್ರಾವತಿ ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಸೈಯದ್ ನಸರುಲ್ಲಾ ಬಿನ್ ಸೈಯದ್ ಜಾಫರ್ ಮೊಹಿದ್ದೀನ್, ವ್ಯವಸಾಯ ಹಾಗೂ ಆಲೆಮನೆ ಮಾಲೀಕರು, ಮಾಧುನಗರ, ಟಿ.ಕೆ. ರಸ್ತೆ, ಭದ್ರಾವತಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಹಾಲಾನಾಯ್ಕ ರವರು ಪ್ರತಿವಾದಿಯವರಲ್ಲಿ ಕೂಲಿ ಆಗಿ ಕೆಲಸದ ಮೇಲೆ ಇದ್ದಾಗ 26.9.2000 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 2.1.06 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 120

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಪ್ರಕರಣ ಸಂಖ್ಯೆ: ಕಾಪಕ:ಸಿಆರ್-2:06, ದಿನಾಂಕ: 16ನೇ ಜನವರಿ 2006**

**ಅರ್ಜಿದಾರರು:**
1. ಮಹ್ಮದ್ ಷಫಿ ಬಿನ್ ಚಮನ್‌ಸಾಬ್
2. ಶ್ರೀಮತಿ ಮಮ್ತಾಜ್‌ಬಾನು ಕೋಂ ಮಹ್ಮದ್‌ಷಫಿ
3. ನಸೀರಾಬಾನು ಬಿನ್ ಮಹ್ಮದ್ ಷಫಿ
4. ಮಹ್ಮದ್ ರಫೀಕ್ ಬಿನ್ ಮಹ್ಮದ್ ಷಫಿ

ಇವರೆಲ್ಲರ ವಾಸ: ಹೊಳನೇರಳೀಕೆರೆ, ಭದ್ರಾವತಿ ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಸೀರಾಜುದ್ದೀನ್‌ಖಾನ್ ಬಿನ್ ಜಿಯಾಮುದ್ದೀನ್, ಹೆಚ್‌ಎನ್ 168, ಖಾಜೀ, ಮೊಹಲ್ಲಾ, ಕೋಟೆ ಏರಿಯಾ, ಭದ್ರಾವತಿ.
2. ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಬಿ.ಎಂ. ರಸ್ತೆ, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮಹ್ಮದ್ ರಫೀಕ್ ಯಾನ್ ನದೀಮ್ ರವರು ಪ್ರತಿವಾದಿಯವರಲ್ಲಿ ಕ್ಲೀನರ್ ಆಗಿ ಕೆಲಸದ ಮೇಲೆ ಇದ್ದಾಗ 1.12.2005 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿ: 2.1.06 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 121

## ಸಹಕಾರ ಇಲಾಖೆ

### ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ಕಾರ್ಯವಾಹಿಗಳು

**ವಿಷಯ:** ಸ್ಥಗಿತಗೊಂಡಿರುವ ನಂದಿಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಚಿತ್ರದುರ್ಗ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಇವರ ಪ್ರಸ್ತಾವನೆ ಸಂಖ್ಯೆ:
2. ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಂಖ್ಯೆ
3. ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿತ್ರದುರ್ಗ ತಾಲ್ಲೂಕು ಇವರ ಪತ್ರ ಸಂಖ್ಯೆ: CDO/ಚಿತ್ರದುರ್ಗ/L&d/05-06 Dt .12.12.05

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಉಲ್ಲೇಖ (1) ರಲ್ಲಿ ಕಾಣಿಸಿರುವ ಪ್ರಸ್ತಾವೆ ಪ್ರಕಾರ ಮೇಲ್ಕಂಡ ಸಂಘವು ನಂ:ಸನಿ30/726/261/79/98-99 5.10.98ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುವುದಲ್ಲದೆ ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರನ್ವಯ ನೋಟೀಸ್ ನೀಡಿದ್ದು ಅವರಿಗೆ ನೋಟೀಸ್ ಜಾರಿಯಾದ ಬಗ್ಗೆ ಉಲ್ಲೇಖ (3)ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ. ಆದಾಗ್ಯೂ ಅವರು ಯಾವುದೇ ಸಮಜಾಯಿಷಿಯನ್ನು ಅಥವಾ ಪ್ರತಿಕ್ರಿಯೆಯನ್ನು ನೀಡದೇ ಸಂಘದ ಆಡಳಿತದಲ್ಲಿ ನಿರುತ್ಸಾಹವನ್ನು ತೋರಿಸಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲವಾದ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುವುದರ ಪ್ರಯುಕ್ತ ಸಂಘವನ್ನು ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವ ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್‌ಡಿ-ಎಲ್‌ಕ್ಯೂಡಿ:ಸಿಆರ್-28:2005-06, ದಿನಾಂಕ: 30ನೇ ಡಿಸೆಂಬರ್ 2005**

ಮೇಲ್ಕಂಡ ಪ್ರಸ್ತಾವೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ನಿಬಂಧಕರು, ಸುನಂದಮ್ಮ ಆದನಾನು ನಂದಿಹಳ್ಳಿ ಹಾಲು ಉತ್ಪಾದಕರ ಸ॥ಸಂ॥ನಿಯಮಿತ, ನಂದಿಹಳ್ಳಿ, ಚಿತ್ರದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿತ್ರದುರ್ಗ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಹಸ್ತ ಸಹಿ ಮತ್ತು ಕಚೇರಿಯ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30.12.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 122 ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ

**ಸಹಕಾರ ಇಲಾಖೆ**

**ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ಕಾರ್ಯವಾಹಿಗಳು**

**ವಿಷಯ:** ಸ್ಥಗಿತಗೊಂಡಿರುವ ಚಿಕ್ಕಗೊಂಡನಹಳ್ಳಿ OGCS ಚಿತ್ರದುರ್ಗ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಇವರ ಪ್ರಸ್ತಾವನೆ ಸಂಖ್ಯೆ:
2. ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಂಖ್ಯೆ
3. ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿತ್ರದುರ್ಗ ತಾಲ್ಲೂಕು ಇವರ ಪತ್ರ ಸಂಖ್ಯೆ: CDO/CTA/L&d/05-06 Dt .12.12.05

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಉಲ್ಲೇಖ (1) ರಲ್ಲಿ ಕಾಣಿಸಿರುವ ಪ್ರಸ್ತಾವೆ ಪ್ರಕಾರ ಮೇಲ್ಕಂಡ ಸಂಘವು ನಂ:ARC/530/RSR/16924/88-89 26.8.1988 ನೊಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುವುದಲ್ಲದೆ ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರನ್ವಯ ನೋಟೀಸ್ ನೀಡಿದ್ದು ಅವರಿಗೆ ನೋಟೀಸ್ ಜಾರಿಯಾದ ಬಗ್ಗೆ ಉಲ್ಲೇಖ (3)ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ. ಆದಾಗ್ಯೂ ಅವರು ಯಾವುದೇ ಸಮಜಾಯಿಷಿಯನ್ನು ಅಥವಾ ಪ್ರತಿಕ್ರಿಯೆಯನ್ನು ನೀಡದೇ ಸಂಘದ ಆಡಳಿತದಲ್ಲಿ ನಿರುತ್ಸಾಹವನ್ನು ತೋರಿಸಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲವಾದ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುವುದರ ಪ್ರಯುಕ್ತ ಸಂಘವನ್ನು ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವ ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್‌ಡಿ-ಎಲ್‌ಕ್ಯೂಡಿ:ಸಿಆರ್-31:2005-06, ದಿನಾಂಕ: 30ನೇ ಡಿಸೆಂಬರ್ 2005**

ಮೇಲ್ಕಂಡ ಪ್ರಸ್ತಾವೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ನಿಬಂಧಕರು, ಸುನಂದಮ್ಮ ಆದ ನಾನು ಚಿಕ್ಕಗೊಂಡನಹಳ್ಳಿ OGCS ಚಿಕ್ಕಗೊಂಡನಹಳ್ಳಿ ಚಿತ್ರದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿತ್ರದುರ್ಗ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಹಸ್ತ ಸಹಿ ಮತ್ತು ಕಚೇರಿಯ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30.12.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 123 ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ

## ಸಹಕಾರ ಇಲಾಖೆ

### ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ಕಾರ್ಯವಾಹಿಗಳು

**ವಿಷಯ:** ಸ್ಥಗಿತಗೊಂಡಿರುವ ಚಿಕ್ಕಗೊಂಡನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ॥ ಚಿಕ್ಕಗೊಂಡನಹಳ್ಳಿ, ಚಿತ್ರದುರ್ಗ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಇವರ ಪ್ರಸ್ತಾವನೆ ಸಂಖ್ಯೆ:
2. ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಂಖ್ಯೆ:
3. ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿತ್ರದುರ್ಗ ತಾಲ್ಲೂಕು ಇವರ ಪತ್ರ ಸಂಖ್ಯೆ: CDO/ಚಿತ್ರದುರ್ಗ/L&d/05-06 Dt .12.12.05

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಉಲ್ಲೇಖ (1) ರಲ್ಲಿ ಕಾಣಿಸಿರುವ ಪ್ರಸ್ತಾವೆ ಪ್ರಕಾರ ಮೇಲ್ಕಂಡ ಸಂಘವು ನಂ:AR30/B/RNR/ನೊಂದಣಿ/66740/88-89 Dt. 14.12.1989ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲವಾಗಿರುವುದಲ್ಲದೆ ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಹೊಂದಿರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರನ್ವಯ ನೋಟೀಸ್ ನೀಡಿದ್ದು ಅವರಿಗೆ ನೋಟೀಸ್ ಜಾರಿಯಾದ ಬಗ್ಗೆ ಉಲ್ಲೇಖ (3)ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ. ಆದಾಗ್ಯೂ ಅವರು ಯಾವುದೇ ಸಮಜಾಯಿಷಿಯನ್ನು ಅಥವಾ ಪ್ರತಿಕ್ರಿಯೆಯನ್ನು ನೀಡದೇ ಸಂಘದ ಆಡಳಿತದಲ್ಲಿ ನಿರುತ್ಸಾಹವನ್ನು ತೋರಿಸಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲವಾದ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುವುದರ ಪ್ರಯುಕ್ತ ಸಂಘವನ್ನು ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವ ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್‌ಡಿ-ಎಲ್‌ಕ್ಯೂಡಿ:ಸಿಆರ್-34:2005-06, ದಿನಾಂಕ: 30ನೇ ಡಿಸೆಂಬರ್ 2005**

ಮೇಲ್ಕಂಡ ಪ್ರಸ್ತಾವೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ನಿಬಂಧಕರು, ಸುನಂದಮ್ಮ ಆದ ನಾನು ಚಿಕ್ಕಗೊಂಡನಹಳ್ಳಿ ಹಾಲು ಉತ್ಪಾದಕರ ಸ॥ಸಂ॥ನಿಯಮಿತ, ಚಿಕ್ಕಗೊಂಡನಹಳ್ಳಿ ಚಿತ್ರದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಚಿತ್ರದುರ್ಗ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಹಸ್ತ ಸಹಿ ಮತ್ತು ಕಚೇರಿಯ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30.12.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 124 ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ

### ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಸಂಖ್ಯೆ:ಎ3(ಬಿ1)ಅಮೊ:ಶ್ರೀಗಂಧ:ಲಾರಿ:6781/2000-01, ದಿನಾಂಕ: 7ನೇ ಜನವರಿ 2006**

**ಉಪಸ್ಥಿತರು:** ಶ್ರೀ ಜಿ.ಎ.ಎನ್. ಕರ್ಕಿಕರ್,
ಪ್ರಾಧಿಕೃತ ಅಧಿಕಾರಿಗಳು
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ಫಿರ್ಯಾದಿ:** ವಲಯ ಅರಣ್ಯಾಧಿಕಾರಿ,
ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ,
(ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು:** ಶ್ರೀ ಜಕ್ರಿಯಾ ಜಾರ್ಜ್,
ಬಿನ್ ಎಸ್. ಜಾರ್ಜ್, ಮರಿಯಾ ಪ್ಲಾಂಟೇಷನ್, ಕೊಪ್ಪ,
ನೀಚಡಿ ಅಂಚೆ, ಸಾಗರ ತಾಲ್ಲೂಕು.
(ಪರವಾಗಿ ಶ್ರೀ ಜಿ. ಮಧು, ವಕೀಲರು, ಶಿವಮೊಗ್ಗ)

**ಪ್ರಕರಣದ ಹಿನ್ನೆಲೆ:**

ದಿನಾಂಕ: 15.7.2000 ರಂದು ಮಧ್ಯಾಹ್ನ ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ಇಲಾಖಾ ವಾಹನದಲ್ಲಿ ಸಿರಿಗೆರೆ-ಹಣಗೆರೆ ರಸ್ತೆಯಲ್ಲಿ ಹೋಗುತ್ತಿರುವಾಗ ಸಂಪಿಗೆಹಳ್ಳದಿಂದ 1 ಕಿ.ಮೀ. ಹಿಂದೆ ಹಣಗೆರೆ-ಸಿರಿಗೆರೆ ರಸ್ತೆಯಲ್ಲಿ ಕೆಂಪು ಬಣ್ಣದ ಅನಂತ ಪದ್ಮನಾಭ ಎಂಬ ಲಾರಿ ಬರುತ್ತಿರುವುದನ್ನು ಕಂಡು, ತಪಾಸಣೆಗಾಗಿ ವಾಹನವನ್ನು ನಿಲ್ಲಿಸುವಂತೆ ಕೈ ಮಾಡಿ ಸೂಚಿಸಿದಾಗ, ಲಾರಿಯನ್ನು ಮಧ್ಯ ರಸ್ತೆಯಲ್ಲಿಯೇ ನಿಲ್ಲಿಸಿ, ಲಾರಿಯಿಂದ ಓಡಲು ಪ್ರಾರಂಭಿಸಿದ 5 ಜನರ ಪೈಕಿ ಇಬ್ಬರನ್ನು ಹಿಡಿದು ಲಾರಿಯನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿದಾಗ ಲಾರಿ ನೊಂದಣಿ ಸಂಖ್ಯೆ MYY-6781 ಇದ್ದ ಮರಳು ತುಂಬಿದ ಈ ಲಾರಿಯ ತಳ ಭಾಗದಲ್ಲಿ ಪ್ಲಾಸ್ಟಿಕ್ ಚೀಲಗಳಲ್ಲಿ ಒರಟು ಕೆತ್ತನೆ ಮಾಡಿದ ಶ್ರೀಗಂಧದ ಬುಡಗಳು, ತುಂಡುಗಳು ಹಾಗೂ ದೊಡ್ಡ ಮತ್ತು ಸಣ್ಣ ಸಣ್ಣ ಚಕ್ಕೆಗಳು ಇರುವುದು ಕಂಡುಬಂದಿದ್ದು, ಸದರಿ ತುಂಡುಗಳ ಮೇಲೆ ಯಾವುದೇ ಸರ್ಕಾರಿ ಛಾಪಾ ವಗೈರೆ ಗುರುತುಗಳಿಲ್ಲದಿರುವುದರಿಂದ,

ಹಾಗೂ ರಹದಾರಿಯಿಲ್ಲದೇ ಇದ್ದುದರಿಂದ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದನ್ನು ಖಚಿತವಾದ ಮೇಲೆ ಪ್ಲಾಸ್ಟಿಕ್ ಚೀಲಗಳಲ್ಲಿದ್ದ ಶ್ರೀಗಂಧದ ಬುಡಗಳು, ತುಂಡುಗಳು ಹಾಗೂ ಚಕ್ಕೆಗಳನ್ನು ತೂಕ ಮಾಡಿದಾಗ ಒಟ್ಟು 2620.00 ಕೆ.ಜಿ. ಇದ್ದಿತು. ಸದರಿ ಶ್ರೀಗಂಧ ಹಾಗೂ ಲಾರಿಯ ಮೇಲೆ ಅರಣ್ಯ ಮೊಕದ್ದಮೆ ದಾಖಲಿಸಿ (4/2000-01 ದಿನಾಂಕ: 15.7.2000) ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಈ ಪ್ರಕರಣದಲ್ಲಿ ದಸ್ತಗಿರಿ ಮಾಡಿದ ಇಬ್ಬರು ಆಸಾಮಿಗಳು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿ, ಅಮಾನತ್ತುಪಡಿಸಿದ ವಾಹನ ಮತ್ತು ಶ್ರೀಗಂಧವನ್ನು 71(ಎ) ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮಕ್ಷಮ ಹಾಜರುಪಡಿಸಿದ ಮೇರೆಗೆ, ಈ ಪ್ರಾಧಿಕಾರವು ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರಿಗೆ ಮುಂದಿನ ಆದೇಶದವರೆಗೆ ಸದರಿ ವಾಹನ ಹಾಗೂ ಶ್ರೀಗಂಧವನ್ನು ಸುರಕ್ಷಿತವಾಗಿ ಇಟ್ಟುಕೊಳ್ಳಲು ಆದೇಶಿಸಿರುತ್ತದೆ.

ಈ ಸಂಬಂಧ ವಾಹನದ ವಿಚಾರಣಾ ಕಾಲಕ್ಕೆ ಮಾಲೀಕರನ್ನು ತಿಳಿದುಕೊಳ್ಳುವ ಬಗ್ಗೆ, ಈ ಪ್ರಾಧಿಕಾರದಿಂದ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಾಗರ ಇವರಿಗೆ ಪತ್ರ ವ್ಯವಹರಿಸಿರುತ್ತದೆ. ಅಲ್ಲದೇ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ಮೂಲ ವಾರಸುದಾರರು / ಮಾಲೀಕರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ರುಜುವಾತುಪಡಿಸುವ ಸಲುವಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವಂತೆ ಸಾರ್ವಜನಿಕರಿಗೆ ತಿಳಿಯಪಡಿಸುವ ಸಲುವಾಗಿ ಪ್ರಕಟಣೆಯನ್ನು ದಿನಾಂಕ: 30.7.2000ರ ಕನ್ನಡಪ್ರಭ ದಿನಪತ್ರಿಕೆಯಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿದೆ.

ಮುಂದುವರಿದು, ದಿನಾಂಕ: 9.10.2000 ರಂದು ವಾಹನದ ಮಾಲೀಕರಾದ ಶ್ರೀ ಜಕ್ರೀಯ ಜಾರ್ಜ್ ಬಿನ್ ಎಸ್. ಜಾರ್ಜ್, ಮರಿಯ ಪ್ಲಾಂಟೇಶನ್, ಕೊಪ್ಪ, ನೀಚಡಿ ಅಂಚೆ, ಸಾಗರ ಇವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ, MYY-6781 ರ ವಾಹನದ ಮಾಲೀಕನಾದ ನಾನು ಈ ಕೃತ್ಯದಲ್ಲಿ ಮುಗ್ದ ಮನಸ್ಸಿನವನಾಗಿದ್ದು, ನಿತ್ಯಜೀವನಕ್ಕೆ ಈ ವಾಹನವನ್ನು ಬಳಸುತ್ತಿದ್ದು, ವಾಹನವು ಸುರಕ್ಷಿತ ಇಲ್ಲದೇ ಹಾಳಾಗುವ ಸಂಭವವಿರುವುದರಿಂದ, ಈ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಸದರಿ ಅರ್ಜಿಗೆ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ: 17.1.2002 ರಂದು ತಕರಾರನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರು ವಕೀಲರ ಮುಖಾಂತರ ಸಲ್ಲಿಸಿದ ಅರ್ಜಿಯನ್ನು ಹಾಗೂ ಸಹಾಯಕ ಅಭಿಯೋಗ ನಿರ್ದೇಶಕರು ಸಲ್ಲಿಸಿದ ತಕರಾರನ್ನು ಪರಿಶೀಲಿಸಿ, ಮಧ್ಯಂತರ ಆದೇಶದ ಮೇಲೆ ಬಿಡುಗಡೆಗೊಳಿಸುವುದು ಸೂಕ್ತವಲ್ಲವೆಂದು ನಿರ್ಣಯಿಸಿ, ಅರ್ಜಿದಾರರು ಸಲ್ಲಿಸಿದ ದಿನಾಂಕ: 9.10.2000ರ ಅರ್ಜಿಯನ್ನು ದಿನಾಂಕ: 28.3.2002 ರಂದು ಈ ನ್ಯಾಯಾಲಯ ತಿರಸ್ಕರಿಸಿ ಆದೇಶ ಹೊರಡಿಸಿರುತ್ತದೆ.

ಪ್ರಸಕ್ತ ಮೊಕದ್ದಮೆಯ ವಿಚಾರಣೆಯನ್ನು ದಿನಾಂಕ: 8.8.2002 ರಿಂದ 19.6.2004 ರವರೆಗೆ ವಿವಿಧ ದಿನಾಂಕಗಳಂದು ವಿಚಾರಣೆ ನಡೆಸಿ ಅಭಿಯೋಗದ ಪರವಾಗಿ ಒಂದು ಸಾಕ್ಷಿಯನ್ನು ವಿಚಾರಣೆ ಮಾಡಿದ್ದು, ಅರ್ಜಿದಾರರ ಪರ ವಿಚಾರಣೆಗಾಗಿ ದಿನಾಂಕ: 31.7.2004 ರಿಂದ 6.8.2005 ರವರೆಗೆ ವಿವಿಧ 20 ದಿನಾಂಕಗಳಂದು ವಿಚಾರಣೆಯನ್ನು ನಿಗದಿಪಡಿಸಿದಾಗ್ಯೂ ಕೂಡ, ಅರ್ಜಿದಾರರ ಪರವಾಗಿ ಯಾವುದೇ ದಾಖಲಾತಿಗಳನ್ನು ಅಥವಾ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ನ್ಯಾಯಾಲಯದ ವಿಚಾರಣೆ ಸಮಯದಲ್ಲಿ ಯಾವುದೇ ಸಾಕ್ಷ್ಯವನ್ನು ವಿಚಾರಣೆಗೊಳಪಡಿಸಿ ಹೇಳಿಕೆಯನ್ನು ಸಹ ದಾಖಲಿಸಿರುವುದಿಲ್ಲ. ಅಲ್ಲದೇ ಪ್ರಾಧಿಕಾರದಿಂದ ಅರ್ಜಿದಾರರಿಗೆ ನ್ಯಾಯಾಲಯದಿಂದ ವಿಚಾರಣೆಗೆ ಹಾಜರಾಗಲು ಸೂಚಿಸಿದಾಗ್ಯೂ ಕೂಡ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿದ್ದಾರೆ. ಆನಂತರ ಅರ್ಜಿದಾರರ ಪರ ವಕೀಲರು ವಾದ ಮಂಡನೆಗೂ ತಿಳಿಸಿದಾಗ್ಯೂ ಕೂಡ ಹಾಜರಾಗದೇ ಇರುವುದರಿಂದ ಅಭಿಯೋಜನಾ ಪರ ವಕೀಲರ ವಾದ-ವಿವಾದವನ್ನು ಕೇಳಿದ ನಂತರ ಲಭ್ಯವಿದ್ದ ಸಾಕ್ಷ್ಯಾಧಾರದಿಂದ ಈ ಕೆಳಗಿನ ಪರಿಶೀಲನಾಂಶಗಳನ್ನು ತೀರ್ಮಾನಿಸಿರುವುದು ಅಗತ್ಯವೆಂದು ಭಾವಿಸಲಾಯಿತು.

1. ಅರ್ಜಿದಾರರ ವಾಹನ ನೊಂದಣಿ ಸಂಖ್ಯೆ MYY-6781 ರಲ್ಲಿ ದಿನಾಂಕ: 15.7.2000 ರಂದು ಕಾನೂನು ಬಾಹಿರವಾಗಿ ಶ್ರೀಗಂಧದ ಬುಡಗಳು ತುಂಡುಗಳು ಮತ್ತು ಚಕ್ಕೆಗಳನ್ನು ಸಾಗಾಣಿಕೆ ಮಾಡಲು ಉಪಯೋಗಿಸಲಾಗಿತ್ತು ಎಂದು ಅಭಿಯೋಗವು ತೃಪ್ತಿಕರವಾಗಿ ಸಿದ್ದಪಡಿಸುವುದೇ?
2. ವಾಹನದ ಮಾಲೀಕರು / ಸುಪರ್ದಿ ಹೊಂದಿದವರ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನದ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅದರ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಮುನ್ನಚ್ಚರಿಕೆ ತೆಗೆದುಕೊಂಡಿದ್ದಾರೆಯೇ?
3. ಯಾವ ಆದೇಶ?

   ಮೇಲೆ ತಿಳಿಸಿದ ಪರಿಶೀಲನಾಂಶವನ್ನು ಲಭ್ಯವಿದ್ದ ಸಾಕ್ಷ್ಯಾಧಾರದ ಮೇಲೆ ಈ ಕೆಳಕಂಡಂತೆ ಉತ್ತರಿಸುತ್ತೇನೆ.

   1. ಕ್ಕೆ ಗುಣಾತ್ಮಕವಾಗಿ
   2. ಕ್ಕೆ ನಕರಾತ್ಮಕವಾಗಿ
   3. ಕ್ಕೆ ಕೊನೆಯ ಆದೇಶದಂತೆ.

### ಅಂಶ-1

ಅಭಿಯೋಗವು ತನ್ನ ಪರವಾಗಿ ಒಂದು ಸಾಕ್ಷಿಯನ್ನು ವಿಚಾರಣೆ ಮಾಡಿದ್ದು, ಪ್ರಥಮ ಸಾಕ್ಷಿ-1 ಶ್ರೀ ಎಸ್.ಎನ್. ಸತೀಶ್ ಬಾಬಾ ರೈ, ವಲಯ ಅರಣ್ಯಾಧಿಕಾರಿಗಳು, ಉಡುಪಿ ವಲಯ ಇವರು ಮೂಲ ವಿಚಾರಣೆಯಲ್ಲಿ ದಿನಾಂಕ: 15.7.2000 ರಂದು ಸುಮಾರು ಸಂಜೆ 4.30 ರ ಸಮಯದಲ್ಲಿ ಅನಂತ ಪದ್ಮನಾಭ ಎಂಬ ಲಾರಿಯಲ್ಲಿ ಮರಳಿನ ಜೊತೆ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಾರೆ ಎಂಬ ಖಚಿತ ವರ್ತಮಾನದ ಮೇರೆಗೆ, ಸಿಬ್ಬಂದಿಗಳೊಂದಿಗೆ ಇಲಾಖಾ ವಾಹನದಲ್ಲಿ ಸಿರಿಗೆರೆ-ಹಣಗೆರೆ ರಸ್ತೆಯಲ್ಲಿ ಹೋಗುತ್ತಿರುವಾಗ ಸಂಪಿಗೆಹಳ್ಳದಕ್ಕಿಂತ 1 ಕಿ.ಮೀ. ದೂರದಲ್ಲಿ ಲಾರಿ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಚಾಲಕನಿಗೆ ಸೂಚಿಸಲಾಯಿತು. ಲಾರಿ ನಿಲ್ಲಿಸಿದ ಚಾಲಕನ್ನೊಳಗೊಂಡ ಲಾರಿಯಲ್ಲಿದ್ದ 5 ಜನರು ಓಡಲು ಪ್ರಾರಂಭಿಸಿದಾಗ, ಸಿಬ್ಬಂದಿಗಳು ಅವರನ್ನು ಬೆನ್ನಟ್ಟಿ 2 ಜನರನ್ನು ಹಿಡಿಯುವಲ್ಲಿ ಸಫಲರಾಗಿದ್ದು, ಸೆರೆಹಿಡಿಯಲಾದ 2 ಆಸಾಮಿಗಳನ್ನು ಲಾರಿಯ ಹತ್ತಿರ ಕರೆತಂದು ವಿಚಾರಣೆ ಮಾಡಿ, ಲಾರಿಯಲ್ಲಿದ್ದ ಮರಳನ್ನು ಹೊರ ತೆಗೆದು ನೋಡುತ್ತಿರುವಾಗ ಪ್ಲಾಸ್ಟಿಕ್ ನೀಲಿ ಹೊದಿಕೆಯಿರುವುದನ್ನು ಕಂಡು ಅದನ್ನು ಸರಿಸಿ ನೋಡಿದಾಗ ಶ್ರೀಗಂಧದ ತುಂಡುಗಳು ಇರುವುದು ಕಂಡುಬಂದವು. ಸದರಿ ಶ್ರೀಗಂಧದ ತುಂಡುಗಳ ಸಾಗಾಣಿಕೆಗೆ ರಹದಾರಿ ಏನಾದರೂ ಇದೆಯೇ ಎಂದು ದಸ್ತಗಿರಿ ಮಾಡಿದ ಆಸಾಮಿಗಳಾದ ಶ್ರೀ ಸುನಿಲ್ ಜಾರ್ಜ್ ಮತ್ತು ಶ್ರೀ ಅಬ್ದುಲ್ ರಹೀಮ್ ರವರನ್ನು ವಿಚಾರಿಸಿದಾಗ, ಸದರಿ ಆಸಾಮಿಗಳು

ಇಲ್ಲವೆಂದು ತಿಳಿಸಿದ ಮೇರೆಗೆ, ಶ್ರೀಗಂಧದ ತುಂಡುಗಳು, ಬುಡಗಳು ಹಾಗೂ ಚಕ್ಕೆಗಳನ್ನು ಅಕ್ರಮ ಸಾಗಾಣಿಕೆ ಮಾಡಲಾಗುತ್ತಿದೆ ಎಂದು ಖಚಿತವಾದ ನಂತರ ಲಾರಿ ಹಿಡಿದ ಪ್ರದೇಶ ಕಾಡಿನ ಪ್ರದೇಶವಾಗಿದ್ದರಿಂದ ಯಾವುದೇ ವ್ಯಕ್ತಿಗಳು ಅಲ್ಲಿ ಪಂಚರನ್ನಾಗಿ ಕರೆತರಲು ಆಗದಿದ್ದ ಕಾರಣಕ್ಕಾಗಿ ಇಲಾಖಾ ಸಿಬ್ಬಂದಿಗಳನ್ನೇ ಪಂಚರನ್ನಾಗಿ ಮಾಡಿಕೊಂಡು ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ 4:2000-01 ದಾಖಲಿಸಲಾಗಿತ್ತೆಂದು ನುಡಿದಿರುತ್ತಾರೆ.

ಮುಂದುವರಿದು, ಲಾರಿಯಲ್ಲಿದ್ದ ಶ್ರೀಗಂಧದ ತುಂಡುಗಳು, ಬುಡಗಳು ಮತ್ತು ಚಕ್ಕೆಗಳನ್ನು ಹೊರತೆಗೆದು ಎಣಿಕೆ ಮಾಡಲಾಗಿ 35 ಬುಡಗಳು ಮತ್ತು 68 ತುಂಡುಗಳು ಒಟ್ಟು 103 ತುಂಡುಗಳು ಇದ್ದು, 103 ತುಂಡುಗಳು ಮತ್ತು ಚಕ್ಕೆಗಳು ಸೇರಿ 2620 ಕೆ.ಜಿ. ಯನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಳ್ಳಲಾಗಿರುತ್ತದೆ ಎಂದು ನುಡಿದಿರುತ್ತಾರೆ.

ಅರಣ್ಯ ಮೊಕದ್ದಮೆ ದಾಖಲು ಮಾಡಿಕೊಂಡ ಬಗ್ಗೆ ಪ್ರಥಮ ಮಾಹಿತಿ ವರದಿ ಸಲ್ಲಿಸಲಾಯಿತು. ಸದರಿ ಪ್ರಥಮ ಮಾಹಿತಿ ವರದಿಯ ಪ್ರತಿಯನ್ನು ನೋಡಿದ್ದು, ಅದನ್ನು ನಿಶಾನೆ-1 ಎಂದು ಪ್ರಕರಣ ದಾಖಲು ಮಾಡಿದ ಬಗ್ಗೆ ವಿವರವಾಗಿ ಬರೆದ ಮಹಜರನ್ನು ತಯಾರಿಸಿದ್ದು, ಅದರ ಪ್ರತಿಯನ್ನು ನೋಡಿದ್ದು, ಅದನ್ನು ನಿಶಾನೆ ಪಿ-2 ಎಂದು, ಅಮಾನತ್ತು ಪಡಿಸಿಕೊಂಡ ಬಗ್ಗೆ ತಯಾರಿಸಿದ ವರದಿಯ ಪ್ರತಿ ನೋಡಿದ್ದು ಅದನ್ನು ನಿಶಾನೆ ಪಿ-3 ಅಂತ ಮತ್ತು ಅಮಾನತ್ತುಪಡಿಸಿದ ವಸ್ತು ವಾಹನದ ಬಗ್ಗೆ ಮೇಲಾಧಿಕಾರಿಗಳಿಗೆ ಸಲ್ಲಿಸಿದ ವರದಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ-4 ಅಂತ ಗುರುತಿಸಲಾಯಿತು ಎಂದು ನುಡಿದಿರುತ್ತಾರೆ. ನಿಶಾನೆ ಪಿ-2 ಪ್ರಕಾರ ವಶಪಡಿಸಿಕೊಂಡ ಶ್ರೀಗಂಧವನ್ನು MO-1 ರಿಂದ 103 ಎಂದು, ಲಾರಿ ನೊಂದಣಿ ಸಂಖ್ಯೆ MYY-6781 ನ್ನು MO-104 ನ್ನು ಗುರುತಿಸಿದ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ. ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಮಹಜರ್‌ನಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಇದ್ದು ಹೊಂದಾಣಿಕೆಯಾಗಿರುತ್ತದೆ.

ಈ ಪಾರ್ಟಿಯ ಪಾಟೀ ಸವಾಲಿನಲ್ಲಿ ಘಟನಾ ಸ್ಥಳಕ್ಕೆ ಯಾವ ಸಿಬ್ಬಂದಿಗಳನ್ನು ಹೇಗೆ ಕರೆತರಲಾಯಿತು, ವರ್ತಮಾನವನ್ನು ಹೇಗೆ ಸ್ವೀಕರಿಸಲಾಯಿತು, ಮಹಜರನ್ನು ಹೇಗೆ ತಯಾರಿಸಲಾಯಿತು ಎನ್ನುವುದನ್ನು ವಿವರವಾಗಿ ತಿಳಿಸಿರುತ್ತಾರೆ. ಪಂಚರನ್ನು ಕರೆತರುವ ಪ್ರಯತ್ನದ ಬಗ್ಗೆ ಕೃತ್ಯ ನಡೆಸಿದ ಸ್ಥಳವು ಕಾಡಿನ ಪ್ರದೇಶವಾದ್ದರಿಂದ ಯಾವುದೇ ವ್ಯಕ್ತಿಗಳನ್ನು ಅಲ್ಲಿಗೆ ಕರೆಸಿಕೊಳ್ಳಲು ಅನಾನುಕೂಲವಾಗಿದ್ದು, ಮತ್ತು ಕೃತ್ಯ ನಡೆದ ಸ್ಥಳದಲ್ಲಿ ಯಾವುದೇ ವಾಸಸ್ಥಳದ ಮನೆ ಇರಲಿಲ್ಲವಾದ್ದರಿಂದ ಇಲಾಖೆಯವರೇ ಪಂಚರನ್ನಾಗಿ ಕಾರ್ಯ ನಿರ್ವಹಿಸಿದ್ದರೆಂದು ಮುಖ್ಯ ವಿಚಾರಣೆಯಲ್ಲಿ ನುಡಿದಿರುತ್ತಾರೆ. ಪಂಚನಾಮೆಯನ್ನು ಕೃತ್ಯ ನಡೆದ ಸ್ಥಳದಲ್ಲಿ ತಯಾರಿಸಿದ್ದು, ಸ್ವತಂತ್ರ ಸಾಕ್ಷಿಗಳನ್ನು ಹಾಜರುಪಡಿಸಿಲ್ಲ. ಶ್ರೀಗಂಧದ ಸಾಗಾಣಿಕೆ ಬಗ್ಗೆ ಸುಳ್ಳು ಮೊಕದ್ದಮೆ ದಾಖಲಿಸಿದೆ ಎಂಬುದನ್ನು ಸಂಪೂರ್ಣವಾಗಿ ಅಲ್ಲಗಳೆದಿರುತ್ತದೆ. ಪಾಟೀ ಸವಾಲಿನಲ್ಲಿ ಮತ್ತು ಮುಖ್ಯ ವಿಚಾರಣೆಯಲ್ಲಿ ನುಡಿದ ಸಾಕ್ಷಿಗೆ ಈ ಸಾಕ್ಷಿಯು ಪೂರಕವಾಗಿ ಹೇಳಿದ್ದರಿಂದ ಯಾವುದೇ ಸಂದರ್ಭದಲ್ಲಿಯೂ ನಂಬಲಾರದ ಅಥವಾ ತಿರಸ್ಕರಿಸುವಂತಹ ಸಾಕ್ಷಿಯು ಬಂದಿರುವುದಿಲ್ಲವಾದ್ದರಿಂದ ಈ ಸಾಕ್ಷಿಯನ್ನು ನಂಬಬಹುದಾಗಿದೆ.

ಅಭಿಯೋಗವು ಮೇಲೆ ತಿಳಿಸಿದ ಸಾಕ್ಷಿಗಳ ಸಾಕ್ಷಿಯಿಂದ ಹಾಗೂ ದಿನಾಂಕ: 15.7.2000 ರಂದು ಅರ್ಜಿದಾರರ ಲಾರಿ ನೊಂದಣಿ ಸಂಖ್ಯೆ MYY-6781 ರಲ್ಲಿ ಅಕ್ರಮವಾಗಿ ಶ್ರೀಗಂಧ ಮತ್ತು ತುಂಡುಗಳನ್ನು ಸಾಗಾಣಿಕೆ ಮಾಡುತ್ತಿದ್ದಾಗ ಅರಣ್ಯ ಇಲಾಖೆಯವರು ಅದನ್ನು ಜಪ್ತಿ ಮಾಡಿರುತ್ತಾರೆಂದು ಸಾಕ್ಷಿ ಹಾಗೂ ನಿಶಾನೆಗಳಿಂದ ದೃಢಪಟ್ಟಿರುವುದರಿಂದ ಪರಿಶೀಲನಾಂಶ 1ನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

**ಅಂಶ-2**

ಈ ಪ್ರಕರಣದಲ್ಲಿ ಅರ್ಜಿದಾರರಿಗೆ ದಿನಾಂಕ: 31.7.2004, 16.10.2004, 30.10.2004, 6.11.2004, 20.11.2004, 04.12.2004, 18.12.2004, 15.1.2005, 22.1.2005, 5.2.2005, 26.2.2005, 16.4.2005, 7.5.2005, 21.5.2005, 28.5.2005, 4.6.2005, 18.6.2005, 2.7.2005, 23.7.2005 ಮತ್ತು 6.8.2005 ರಂದು ನ್ಯಾಯಾಲಯದಲ್ಲಿ ವಿಚಾರಣೆ ನಡೆದಿದ್ದು, ವಿಚಾರಣೆಗೆ ಹಾಜರಾಗಲು ನೋಟೀಸ್ ನೀಡಿದ್ದರೂ ಸಹ ಹಾಜರಾಗದೇ, ಈ ಬಗ್ಗೆ ಅರ್ಜಿದಾರರಿಗಾಗಲೀ ಅವರ ಪರ ವಕೀಲರಾಗಲೀ ನ್ಯಾಯಾಲಯಕ್ಕೆ ಹಾಜರಾಗದೇ ಗೈರು ಹಾಜರಾಗಿರುತ್ತಾರೆ.

ಅರ್ಜಿದಾರರು ಅವರ ಗಮನಕ್ಕೆ ಬಾರದೇ ಈ ಅಕ್ರಮ ಕೃತ್ಯ ನಡೆದಿದೆ ಎಂಬುದಕ್ಕೆ ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿರುವುದಿಲ್ಲ.

ಅರ್ಜಿದಾರರು ತನ್ನ ವಾಹನವನ್ನು ಅಕ್ರಮ ಕೃತ್ಯದಲ್ಲಿ ತೊಡಗಿಸಿದವರ ಮೇಲೆ ಅರಣ್ಯ ಇಲಾಖೆಗಾಗಲೀ ಅಥವಾ ಪೊಲೀಸ್ ಇಲಾಖೆಯ ಅಧಿಕಾರಿಗಳಿಗಾಗಲೀ ಯಾವುದೇ ದೂರು ಕೊಟ್ಟ ಬಗ್ಗೆ ದಾಖಲೆ ಹಾಜರುಪಡಿಸಿರುವುದಿಲ್ಲ.

ಅರ್ಜಿದಾರರು ನ್ಯಾಯಾಲಯದ ಆದೇಶವನ್ನು ಪಾಲಿಸದೇ ನ್ಯಾಯಾಲಯಕ್ಕೆ ಗೈರು ಹಾಜರಾಗಿ ತಪ್ಪಿಸಗಿರುತ್ತಾರೆ. ಹಾಗೂ ಸದರಿ ಪ್ರಕರಣದಲ್ಲಿ ಅರ್ಜಿದಾರರ ಪಾತ್ರ ಇರುವುದಿಲ್ಲ. ಎಂಬ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳು ಮತ್ತು ಖುದ್ದಾಗಿ ನ್ಯಾಯಾಲಯಕ್ಕೆ ಹಾಜರಾಗಿ ಹೇಳಿಕೆ ನೀಡದೇ ತಪ್ಪಿಸಿ ಕೊಂಡಿರುವುದರಿಂದ ವಾಹನದ ಮಾಲೀಕರು ಅವರ ತಿಳುವಳಿಕೆಯಿಂದಲೇ ಅರಣ್ಯ ಉತ್ಪನ್ನದ ಅಕ್ರಮ ಸಾಗಾಣಿಕೆ ಕೃತ್ಯ ನಡೆದಿದೆ ಮತ್ತು ವಾಹನದ ಮಾಲೀಕರು ಸಹ ಈ ಅರಣ್ಯ ಉತ್ಪನ್ನದ ಕಳ್ಳ ಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿರುವುದಿಲ್ಲ.

ಮುಖ್ಯವಾಗಿ ಅರ್ಜಿದಾರರು ತನ್ನನ್ನು ವಿಚಾರಣೆಗೊಳಪಡಿಸಿಕೊಂಡು ನ್ಯಾಯಾಲಯದಲ್ಲಿ ಸಾಕ್ಷಿ ನೀಡುವ ಮೂಲಕ ಹಾಗೂ ಯಾವುದೇ ಸಾಕ್ಷ್ಯ ಪುರಾವೆಯಿಂದ ರುಜುವಾತುಪಡಿಸದೇ ಇರುವುದು ಪೂರ್ಣ ಸಂಶಯಕ್ಕೆ ಎಡೆ ಮಾಡಿದೆ. ಅಭಿಯೋಗವು ದಿನಾಂಕ: 15.7.2000 ರಂದು ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಬಳಸಿರುವುದನ್ನು ರುಜುವಾತುಪಡಿಸುತ್ತದೆ.

ಕರ್ನಾಟಕ ಅರಣ್ಯ ಕಾಯಿದೆ ಕಾನೂನಿನಂತೆ ಮೂಲಭೂತವಾಗಿ ಅರ್ಜಿದಾರರು ತನ್ನ ತಿಳುವಳಿಕೆ ಪರಿಜ್ಞಾನದಿಂದ ತನ್ನ ವಾಹನ ಅಪರಾಧದಲ್ಲಿ ಪಾಲ್ಗೊಂಡಿಲ್ಲವೆಂದು, ಹಾಗೂ ಅರ್ಜಿದಾರರು ಇಂತಹ ಅಕ್ರಮವನ್ನು ತಪ್ಪಿಸಲು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವುದನ್ನು ಸಾಬೀತುಪಡಿಸಿರುವುದಿಲ್ಲ.

ಆದ್ದರಿಂದ ಅರಣ್ಯ ಕಾಯಿದೆ 1963 ನಿಯಮ 71(ಎ) ಯಿಂದ 71(ಜಿ) ರಲ್ಲಿ ಯಾವುದೇ ವಾಹನವು ಅರಣ್ಯ ಅಪರಾಧದಲ್ಲಿ ಅಕ್ರಮವಾಗಿ ತೊಡಗಿದೆ ಹಾಗೂ ಅಂತಹ ಅಕ್ರಮ ಚಟುವಟಿಕೆಯಲ್ಲಿ ವಾಹನದ ಮಾಲೀಕರು ಹಾಗೂ ಅವರು ನೇಮಕ ಮಾಡಿದಂತಹ ವ್ಯಕ್ತಿಗಳು ಭಾಗಿಯಾಗಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿದು ಬಂದಲ್ಲಿ, ವಾಹನವನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ ಎಂಬುದನ್ನು ಪರಿಗಣನೆಗೆ ತೆಗೆದುಕೊಂಡು ಮೇಲ್ಕಂಡ ಅಂಶಗಳನ್ನು ಪರಿಶೀಲನೆ ಮಾಡಿ ಅರ್ಜಿದಾರರು ತಾನು ತಪ್ಪಿತಸ್ಥರಲ್ಲ ಎಂದು ಮತ್ತು ವಾಹನ ಅಕ್ರಮ ಚಟುವಟಿಕೆಗೆ ಉಪಯೋಗಿಸಿರುವುದು ತನ್ನ ತಿಳುವಳಿಕೆ ಇರುವುದಿಲ್ಲ ಎಂಬ ಬಗ್ಗೆ ರುಜುವಾತುಪಡಿಸಲು ವಿಫಲರಾಗಿರುತ್ತಾರೆ. ಆದ್ದರಿಂದ, ಅಂಶ 2ಕ್ಕೆ ನಕರಾತ್ಮಕವಾಗಿ ಪರಿಗಣಿಸಲಾಗಿದೆ. ಪರಿಶೀಲನಾಂಶ 3ಕ್ಕೆ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ, ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು, 1963ರ ಕರ್ನಾಟಕ ಅರಣ್ಯ ಅಧಿನಿಯಮ 71ಎ ಪ್ರಕಾರ, ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ವಾಹನ ಲಾರಿ ನೊಂದಣಿ ಸಂಖ್ಯೆ MYY-6781 ನ್ನು ಛಾಸ್ಸಿ ಸಂಖ್ಯೆ 3440737-27146, ಇಂಜೀನ್ ಸಂಖ್ಯೆ ಕಾಣಿಸುವುದಿಲ್ಲ ಮತ್ತು ಪ್ರಕರಣದಲ್ಲಿ ವಶಪಡಿಸಿಕೊಂಡ 2620 ಕೆ.ಜಿ. ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ. ಈ ಪ್ರಕರಣದಲ್ಲಿ ಆಪಾದಿತರ ಮೇಲೆ ಕ್ರಿಮಿನಲ್ ಮೊಕದ್ದಮೆ ನಡೆಯುತ್ತಿರುವುದರಿಂದ, ಕ್ರಿಮಿನಲ್ ಮೊಕದ್ದಮೆ ಇತ್ಯರ್ಥವಾಗುವವರೆವಿಗೂ ಶ್ರೀಗಂಧವನ್ನು ಸುರಕ್ಷಿತವಾಗಿ ಕಾಯ್ದುಕೊಳ್ಳುವುದು.

ಈ ಆದೇಶವು ಈ ದಿನಾಂಕ: 7.1.2006 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಸದರಿ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸದೇ ಇದ್ದರೆ, ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವು ದಿನಾಂಕ: 7.1.2006 ರಂದು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ತೆರೆದ ನ್ಯಾಯಾಲಯದಲ್ಲಿ ಉದ್ಘೋಷಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ವಿಚಾರಣೆ ಮಾಡಲ್ಪಟ್ಟ ಸಾಕ್ಷಿಗಳು:**

1. **ಅಭಿಯೋಜನಾ ಪರ ಸಾಕ್ಷಿ:**

ಅ) ಶ್ರೀ ಎಸ್. ಸತೀಶ್ ಬಾಬಾ ರೈ ವಲಯ ಅರಣ್ಯಾಧಿಕಾರಿ, (ಹಿಂದಿನ) ಹಣಗೆರೆ ವನ್ಯಜೀವಿ ವಲಯ ಸಿರಿಗೆರೆ — ಪಿಡಬ್ಲ್ಯೂ-1

2. **ಅಭಿಯೋಜನಾ ಪರನಿಶಾನಿಸಲ್ಪಟ್ಟ ದಾಖಲೆಗಳು:**

| | | | |
|---|---|---|---|
| 1. | ಪ್ರಥಮ ಮಾಹಿತಿ ವರದಿ | - | ನಿಶಾನೆ ಪಿ 1 |
| 2. | ಸ್ಥಳ ಮಹಜರ್ | - | ನಿಶಾನೆ ಪಿ 2 |
| 3. | ಅಮಾನತ್ತು ವರದಿ | - | ನಿಶಾನೆ ಪಿ 3 |
| 4. | ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ ಇವರು ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರಿಗೆ ಬರೆದ ದಿನಾಂಕ: 16.7.2000ರ ಪತ್ರ | - | ನಿಶಾನೆ ಪಿ 4 |
| 5. | ಶ್ರೀಗಂಧದ ಬುಡಗಳು, ತುಂಡುಗಳು ಹಾಗೂ ಚಕ್ಕೆಗಳು 2620.00 ಕೆ.ಜಿ. | - | MO 1 to 103 |
| 6. | ಲಾರಿ ನೊಂದಣಿ ಸಂಖ್ಯೆ MYY 6781 | - | MO 104 |

3. **ಅರ್ಜಿದಾರರ ಪರ ಸಾಕ್ಷಿ ಹಾಗೂ ಗುರುತಿಸಲ್ಪಟ್ಟ ದಾಖಲೆಗಳು:**

-ಇಲ್ಲ-

**ಜಿ.ಎ.ಎನ್. ಕರ್ಕೀಕರ್**
ಪಿ.ಆರ್. 125 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

**ಸಂಖ್ಯೆ:ಎ3(ಬಿ1) ಅಮೊ: ಶ್ರೀಗಂಧ: ಹೀರೋಹೊಂಡಾ: 6529/2001-02 ದಿನಾಂಕ: 7ನೇ ಜನವರಿ 2006**

**ಉಪಸ್ಥಿತರು** : ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಫಿರ್ಯಾದಿ** : ವಲಯ ಅರಣ್ಯಾಧಿಕಾರಿ ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು (ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು)

**ಅರ್ಜಿದಾರ** : ಶ್ರೀ ಎ.ಕೆ.ದೇವದಾಸ್, ಬಿನ್ ಕಾಂತಪ್ಪ ಗೌಡ, ಶಂಕದಹೊಳೆ ಗ್ರಾಮ (ಪರವಾಗಿ ಶ್ರೀ ನಾಗೇಶನ್, ವಕೀಲರು, ಶಿವಮೊಗ್ಗ)

**ಪ್ರಕರಣದ ಹಿನ್ನೆಲೆ:**

ದಿನಾಂಕ:10.10.2001 ರಂದು ಬಂದ ಖಚಿತ ವರ್ತಮಾನದ ಮೇರೆಗೆ, ಸಕ್ರೆಬೈಲು ಶಾಖೆಯ ವನಪಾಲಕರು ಮತ್ತು ಗಾಜನೂರು ಅರಣ್ಯ ತನಿಖಾ ಠಾಣೆಯ ವನಪಾಲಕರು ಹಾಗೂ ಸಿಬ್ಬಂದಿಗಳು ಗಾಜನೂರು ತನಿಖಾ ಠಾಣೆಯ ಬಳಿ ಕಾಯುತ್ತಿರುವಾಗ, ಬೆಳಿಗ್ಗೆ ಸುಮಾರು 7.30 ರ ಸಮಯದಲ್ಲಿ ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆ ಹೋಗಲು ಬಂದ ಸಿಲ್ವರ್ ಬಣ್ಣದ ಹೀರೊಹೊಂಡ ಸ್ಪ್ಲೆಂಡರ್ ನೊಂದಣಿ ಸಂಖ್ಯೆ KA.14.L.6529 ನ್ನು ಪರಿಶೀಲಿಸಿದಾಗ, ಈ ಬೈಕಿನಲ್ಲಿ ಇಲಾಖಾ ಛಾಪಾ ಮುದ್ರಿಸದ 12 ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳಿರುವುದನ್ನು ಕಂಡು, ಇವುಗಳ ಸಾಗಾಣಿಕೆಗೆ ರಹದಾರಿ ಇದೆಯೇ ಎಂದು ಬೈಕಿನ ಚಾಲಕನಿಗೆ ವಿಚಾರಿಸಿದಾಗ, ಸದರಿ ಬೈಕಿನ ಚಾಲಕ ಯಾವುದೇ ರಹದಾರಿ ಇಲ್ಲವೆಂದು ತಿಳಿಸಿದ ಮೇರೆಗೆ, ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಶ್ರೀಗಂಧದ ತುಂಡು 10.00 ಕೆ.ಜಿ. ಮತ್ತು ಚಕ್ಕೆಗಳು 8.00 ಹಾಗೂ ಇವುಗಳ ಸಾಗಾಣಿಕೆಗೆ ಬಳಸಿದ ಮೇಲ್ಕಂಡ ದ್ವಿಚಕ್ರ ವಾಹನವನ್ನು ಸರ್ಕಾರದ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ಸಂಖ್ಯೆ 58/2001-02 ನ್ನು ದಾಖಲಿಸಿ, ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ಹಾಗೂ ಮಹಜರ್‌ನೊಂದಿಗೆ

ವಶಪಡಿಸಿಕೊಂಡ ವಾಹನ ಮತ್ತು ಸ್ವತ್ತನ್ನು ಕರ್ನಾಟಕ ಅರಣ್ಯ ಕಾಯಿದೆ 1963 ರ 71 ಎ ಕಲಂ ಎ ನಿಂದ ಎಫ್ ರವರೆಗೆ ಮುಂದಿನ ಕ್ರಮ ಕೈಗೊಳ್ಳುವ ಕುರಿತು, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಸದರಿ ವಾಹನ ಮತ್ತು ಸ್ವತ್ತನ್ನು ಪರಿಶೀಲಿಸಿ ಪ್ರಾಧಿಕೃತ ಅಧಿಕಾರಿಯವರು ಮುಂದಿನ ಆದೇಶವಾಗುವವರೆಗೆ ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಸುಪರ್ದಿಯಲ್ಲಿ ಸುರಕ್ಷತೆಗಾಗಿ ಇಟ್ಟುಕೊಳ್ಳಲು ಆದೇಶ ಮಾಡಿದ್ದು, ಪ್ರಕರಣದಲ್ಲಿ ದಸ್ತಗಿರಿ ಮಾಡಿದ ಇಬ್ಬರು ಆಸಾಮಿಗಳನ್ನು ಬಂಧಿಸಿ ನ್ಯಾಯಾಂಗ ವಶಕ್ಕೆ ಕೊಡಲಾಗಿದೆ.

ನಂತರ ಈ ಪ್ರಕರಣದ ವಿಚಾರಣಾ ಕಾಲಕ್ಕೆ ವಶಪಡಿಸಿಕೊಂಡ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಲ್ಲಿ ಪತ್ರ ವ್ಯವಹರಿಸಿ ವಾಹನದ "ಬಿ" ವರದಿಯನ್ನು ಪಡೆದು ಪರಿಶೀಲಿಸಿದಾಗ KA.14.L.6529 ವಾಹನವು ದಿನಾಂಕ:18.09.2000 ರಿಂದ ಶ್ರೀ ಎ.ಕೆ.ದೇವದಾಸ್ ಬಿನ್ ಕಾಂತಪ್ಪಗೌಡ ಅಂಬ್ಲಿಕೆ, ಸುಂಕದಹೊಳೆ ಅಂಚೆ, ತೀರ್ಥಹಳ್ಳಿ ತಾಲ್ಲೂಕು ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿರುತ್ತದೆ. ಈ ಬಗ್ಗೆ ಈ ಪ್ರಾಧಿಕಾರದಿಂದ ದಿನಾಂಕ: 11.09.2002 ರಂದು ಶ್ರೀ ಎ.ಕೆ.ದೇವದಾಸ್ ರವರಿಗೆ 1963ರ ಕರ್ನಾಟಕ ಅರಣ್ಯ ಕಾಯಿದೆ ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳುವ ಪತ್ರವನ್ನು ನೊಂದಾಯಿತ ಅಂಚೆ ಮೂಲಕ ಜಾರಿಮಾಡಲಾಗಿರುತ್ತದೆ. ಈ ಬಗ್ಗೆ ವಾಹನ ಮಾಲೀಕರಾದ ಶ್ರೀಎ.ಕೆ. ದೇವದಾಸ್ ರವರು ವಕೀಲರ ಮುಖಾಂತರ ವಾಹನವನ್ನು ಸಂಬಂಧಪಟ್ಟ ಆರ್.ಸಿ. ಜೆರಾಕ್ಸ್ ನೊಂದಿಗೆ ಕಾರಣ ಕೇಳುವ ಪತ್ರಕ್ಕೆ ಉತ್ತರವನ್ನು ದಿನಾಂಕ:19.09.2002 ರಂದು ಈ ಪ್ರಾಧಿಕಾರಕ್ಕೆ ನೀಡಿರುತ್ತಾರೆ. ಸದರಿ ಉತ್ತರದ ಅರ್ಜಿ ಬಗ್ಗೆ ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು ತಕರಾರನ್ನು ದಿನಾಂಕ: 16.12.2003 ರಂದು ಸಲ್ಲಿಸಿರುತ್ತಾರೆ. ವಾಹನ ಮಾಲೀಕರ ಅರ್ಜಿಯನ್ನು ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರ ಆಕ್ಷೇಪಣೆಯನ್ನು ಪರಿಶೀಲಿಸಿ, ಈ ಪ್ರಾಧಿಕಾರವು ದಿನಾಂಕ: 01.01.2005 ರಂದು ಹೊರಡಿಸಿದ ಆದೇಶದಲ್ಲಿ ವಾಹನ ಮಾಲೀಕರು ತಾತ್ಕಾಲಿಕ ಬಿಡುಗಡೆಗೆ ಕೇಳಿದ ಅರ್ಜಿಯನ್ನು ತಿರಸ್ಕರಿಸಿರುತ್ತದೆ.

ಈ ಪ್ರಕರಣದ ವಿಚಾರಣಾ ಕಾಲಕ್ಕೆ ಹೇಳಿಕೆ ಅಭಿಯೋಗದ ಪರವಾಗಿ ಶ್ರೀ ಎ.ವಿ.ಸತೀಶ್, ವನಪಾಲಕ ಇವರ ಸಾಕ್ಷಿಯನ್ನು ಪ್ರಾಸಿಕ್ಯೂಷನ್ ಸಾಕ್ಷಿ-1 (ಪಿಡಬ್ಲ್ಯು-1) ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು. ಪ್ರತಿವಾದಿಯ ಪರವಾಗಿ ಶ್ರೀ ಎ.ಕೆ. ದೇವದಾಸ್, ವಾಹನ ಮಾಲೀಕರು ಇವರನ್ನು ಅರ್ಜಿದಾರರ ಸಾಕ್ಷಿ-1 (ಡಿಡಬ್ಲ್ಯು-1) ಎಂದು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಗಿದೆ.

ಈ ಪ್ರಕರಣಕ್ಕೆ ಹಾಜರುಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು, ಹಾಗೂ ಅರ್ಜಿದಾರರ ಪರವಾಗಿ ನ್ಯಾಯವಾದಿಗಳು ಮಂಡಿಸಿದ ವಾದ ಹಾಗೂ ಅಭಿಯೋಜನೆ ಪರ ಸಹಾಯಕ ಅಭಿಯೋಜಕ ನಿರ್ದೇಶಕರು ಮಂಡಿಸಿದ ವಾದ -ವಿವಾದವನ್ನು ಕೇಳಿದ ನಂತರ ಈ ಕೆಳಗಿನ ಪರಿಶೀಲನಾಂಶವನ್ನು ತೀರ್ಮಾನಿಸುವುದು ಅಗತ್ಯವೆಂದು ಭಾವಿಸಲಾಯಿತು.

1. ಅರ್ಜಿದಾರರ ವಾಹನ ಹೀರೋಹೊಂಡ ಬೈಕ್ ನೊಂದಣಿ ಸಂಖ್ಯೆ KA.14.L.6529 ರಲ್ಲಿ ಶ್ರೀಗಂಧವನ್ನು ಅಕ್ರಮವಾಗಿ ದಿನಾಂಕ: 10.10.2001 ರಂದು ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ಕಾಯಿದೆ 71 (ಬಿ) ಪ್ರಕಾರ ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಕಾಲಾವಕಾಶವನ್ನು ನೀಡಲಾಗಿದೆಯೇ.
3. ವಾಹನ ಮಾಲೀಕರು ಸದರಿ ವಾಹನದಲ್ಲಿ ಶ್ರೀಗಂಧ ಕಳ್ಳ ಸಾಗಾಣಿಕೆಯಾದ ಬಗ್ಗೆ ತನಗೆ ಗೊತ್ತಿಲ್ಲ ಅಥವಾ ಅಪರಾಧಕ್ಕೆ ವಾಹನ ಉಪಯೋಗಿಸದಂತೆ ಮುಂಜಾಗ್ರತಾ ಕ್ರಮಗಳನ್ನು ಕೈಗೊಂಡಿದ್ದೇನೆಂಬ ವಿಷಯದ ಬಗ್ಗೆ ಸಿದ್ದಪಡಿಸುವರೆ?
4. ಯಾವ ಆದೇಶ?
   1. ಕ್ಕೆ ಗುಣಾತ್ಮಕವಾಗಿ
   2. ಕ್ಕೆ ಗುಣಾತ್ಮಕವಾಗಿ
   3. ಕ್ಕೆ ನಕರಾತ್ಮಕವಾಗಿ.
   4. ಕ್ಕೆ ಕೊನೆಯ ಆದೇಶದಂತೆ.

**ಅಂಶ-1**

ಅಭಿಯೋಗವು ತನ್ನ ಪರವಾಗಿ ಒಂದು ಸಾಕ್ಷಿಯನ್ನು ವಿಚಾರಣೆ ಮಾಡಿದ್ದು, ಅಭಿಯೋಜನಾ ಸಾಕ್ಷಿ-1 ಶ್ರೀ ಎ.ವಿ. ಸತೀಶ್, ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯ, ಪಾಂಡವಪುರ ಇವರು ತಾನು 2000ನೇ ಇಸವಿಯಿಂದ 2003ನೇ ಇಸವಿಯವರೆಗೆ ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರಿನಲ್ಲಿ ವನಪಾಲಕರಾಗಿ ಕೆಲಸ ಮಾಡುತ್ತಿದ್ದೇನೆಂದು, ಹಾಗೂ ದಿನಾಂಕ:10.10.2001 ರಂದು ತನಿಖಾ ಠಾಣೆಯಲ್ಲಿ ವಾಹನಗಳ ತಪಾಸಣೆ ಮಾಡುತ್ತಿದ್ದು, ಸದರಿ ದಿವಸ ಬೆಳಗ್ಗೆ 7.30 ಕ್ಕೆ ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆಗೆ ಗಾಜನೂರು ತನಿಖಾ ಠಾಣೆಯ ಹತ್ತಿರ ಬಂದ ಸಿಲ್ವರ್ ಬಣ್ಣದ ಹೀರೋ ಹೊಂಡಾ ಸ್ಪ್ಲೆಂಡರ್ ದ್ವಿಚಕ್ರ ವಾಹನ ತಡೆದು ನಿಲ್ಲಿಸಿದಾಗ ಇಬ್ಬರು ಆಸಾಮಿಗಳು ಹಿಂಬದಿಯಿಂದ ಕೆಳಗಿಳಿದರು. ನಂತರ ಪರಿಶೀಲಿಸಿದಾಗ ಗಾಡಿಯಲ್ಲಿ ಒಂದು ಪ್ಲಾಸ್ಟಿಕ್ ಚೀಲವಿದ್ದು, ಅದರಲ್ಲಿ 12 ಶ್ರೀಗಂಧದ ತುಂಡುಗಳಿರುವುದು ಕಂಡುಬಂದಿದ್ದು, ಈ ಬಗ್ಗೆ ಸ್ಥಳದಲ್ಲಿ ಆಸಾಮಿ ಯಾವುದೇ ದಾಖಲಾತಿಯನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ಸದರಿ ತುಂಡುಗಳ ಮೇಲೆ ಯಾವುದೇ ಛಾಪಾ ಕಂಡುಬಾರದೇ ಇದ್ದು, ಅಕ್ರಮವೆಂದು ಪರಿಗಣಿಸಿ ಇಲಾಖಾ ಪರ ವಾಹನ ಮತ್ತು ಶ್ರೀಗಂಧವನ್ನು ಜಪ್ತು ಮಾಡಿ, ಪಂಚನಾಮೆಯನ್ನು ಜರುಗಿಸಿ, ಅರಣ್ಯ ಮೊಕದ್ದಮೆ ಸಂಖ್ಯೆ 58/2001-02 ನ್ನು ದಾಖಲಿಸಿಕೊಳ್ಳಲಾಯಿತು. ನಂತರ ವಾಹನದಲ್ಲಿದ್ದ ಇಬ್ಬರು ಆಸಾಮಿಗಳನ್ನು ದಸ್ತಗಿರಿ ಮಾಡಿ ನ್ಯಾಯಾಂಗ ವಶಕ್ಕೆ ಕೊಡಲಾಗಿರುತ್ತದೆ. ಮುಂದುವರಿದ ಈ ಸಾಕ್ಷಿಯು ಸ್ಥಳದಲ್ಲಿ ತಯಾರಿಸಿದ ಮಹಜರನ್ನು ನೋಡಿದ್ದು, ಅದನ್ನು ನಿಶಾನೆ ಪಿ-1, ಪ್ರಥಮ ವರ್ತಮಾನ ವರದಿ ನಿಶಾನೆ-2, ಅಮಾನತ್ತು ವರದಿಯನ್ನು ನಿಶಾನೆ-3 ಎಂದು ಗುರುತಿಸಿರುತ್ತಾರೆ ಮತ್ತು ಜಪ್ತು ಮಾಡಿದ ಮೋಟಾರ್ ಸೈಕಲ್ ನೊಂದಣಿ ಸಂಖ್ಯೆ KA.14.L.6529 ನ್ನುM0-1 ಎಂದು ಶ್ರೀಗಂಧದ ತುಂಡುಗಳಿಗೆ M0-2 ಎಂದು ಗುರುತಿಸಲಾಯಿತು ಎಂಬುದಾಗಿ ನುಡಿದಿರುತ್ತಾರೆ.

ಈ ಸಾಕ್ಷಿಯ ಪಾಟೀ ಸವಾಲಿನಲ್ಲಿ ಗಾಜನೂರು ತನಿಖಾ ಠಾಣೆಯನ್ನು ವನ್ಯಜೀವಿ ವಿಭಾಗದವರು ನೋಡಿಕೊಳ್ಳುತ್ತಾರೆ. ಅಲ್ಲಿ ಕೆಲಸ ಮಾಡುವ ಸಿಬ್ಬಂದಿ ವನ್ಯಜೀವಿ ವಿಭಾಗಕ್ಕೆ ಸಂಬಂಧಪಟ್ಟವರಾಗಿರುತ್ತಾರೆ. ಆದಿನ ತನಿಖಾ ಠಾಣೆಯಲ್ಲಿರುವ ಶ್ರೀ ಕರಿಯಪ್ಪ ವನಪಾಲಕರಿಗೆ ಶ್ರೀಗಂಧ ಸಾಗಾಣಿಕೆ ಮಾಹಿತಿ ಬಂದಿತ್ತೆಂದು ನುಡಿದಿರುತ್ತಾರೆ. ಅರಣ್ಯ ಮೊಕದ್ದಮೆಯ ಸಂಖ್ಯೆಯನ್ನು ಜಪ್ತು ಮಾಡಿದ ಪ್ರತಿಯೊಂದು ತುಂಡಿನ ಮೇಲೆ ದಾಖಲಿಸಿಲ್ಲ ಎನ್ನುವ ಬಗ್ಗೆ, ಬರೆಯಲು ಅವಶ್ಯಕ ಇರುವ ತುಂಡಿನ ಮೇಲೆ ಬರೆದಿದ್ದೇವೆ ಎಂಬುದಾಗಿ ನುಡಿದಿರುತ್ತಾರೆ. ಪ್ರಕರಣದಲ್ಲಿ ಮುದ್ದೆ ಮಾಲು ಆರೋಪಿತರಿಂದ ಜಪ್ತು ಮಾಡಿಲ್ಲ ಎನ್ನುವುದನ್ನು ತಿರಸ್ಕರಿಸಿರುತ್ತಾರೆ. ಶ್ರೀಗಂಧವನ್ನು ಆರೋಪಿತರಿಂದ ವಶಪಡಿಸಿಕೊಂಡಿಲ್ಲ ಎಂಬುದನ್ನು

ನಿರಾಕರಿಸಿರುತ್ತಾರೆ. ಪಂಚನಾಮೆಗೆ ಪಂಚರನ್ನು ಕರೆಸಬಹುದಿತ್ತು ಎನ್ನುವ ಬಗ್ಗೆ ಮಹಜರ್ನಲ್ಲಿಯೇ ತಿಳಿಸಿರುತ್ತಾರೆ. ಪಂಚರು ಸಿಗದೇ ಇರುವ ಕಾರಣ ಇಲಾಖೆಯವರೇ ಪಂಚರಾಗಿರುವುದಾಗಿ ಮತ್ತು ದಾಖಲೆಯನ್ನು ತಯಾರಿಸಿದ ಬಗ್ಗೆ ನುಡಿದಿರುತ್ತಾರೆ. ದಿನಾಂಕ:10.10.2001 ರಂದು ಬೆಳಗ್ಗೆ 7.30 ಕ್ಕೆ ಗಾಜನೂರು ತನಿಖಾ ಠಾಣೆಯ ಹತ್ತಿರ ಹೀರೋ ಹೊಂಡಾ ಬಂದಿಲ್ಲವೆಂಬುದನ್ನು ಮತ್ತು ವಾಹನದಲ್ಲಿ ಶ್ರೀಗಂಧ ಸಾಗಿಸುತ್ತಿರಲಿಲ್ಲ ಎನ್ನುವುದನ್ನು ಹಾಗೂ ದಿನಾಂಕ :09.10.2001ರಂದು ರಾತ್ರಿ 10.30 ಘಂಟೆಗೆ ಆರೋಪಿತ ಶ್ರೀ. ಎ.ಕೆ. ದೇವದಾಸ್ ಶಿವಮೊಗ್ಗದಿಂದ ತೀರ್ಥಹಳ್ಳಿಗೆ ಹೋಗುವ ಸಲುವಾಗಿ ತನಿಖಾ ಠಾಣೆಯ ಬಳಿ ಬಂದಿದ್ದರು ಎಂಬುದೆಲ್ಲವನ್ನು ಸಹ ನಿರಾಕರಿಸಿರುತ್ತಾರೆ. ತನಿಖಾ ಠಾಣೆಯ ಬಳಿ ಜಗಳವಾಯಿತು, ಈ ಕಾರಣಕ್ಕಾಗಿ ಸುಳ್ಳು ಪ್ರಕರಣ ದಾಖಲು ಮಾಡಿರುವುದರ ಬಗ್ಗೆ ಮತ್ತು ಮುದ್ದೆ ಮಾಲಿಗೂ ಆರೋಪಿತರಿಗೂ ಯಾವುದೇ ಸಂಬಂಧವಿರುವುದಿಲ್ಲ ಎಂಬುದನ್ನು ನಿರಾಕರಿಸಿರುತ್ತಾರೆ. ಪಾಟೀ ಸವಾಲಿನಲ್ಲಿ ಮುಖ್ಯ ವಿಚಾರಣೆಯಲ್ಲಿ ಸಾಕ್ಷ್ಯಕ್ಕೆ ಈ ಸಾಕ್ಷಿಯು ಪೂರಕವಾಗಿ ಹೇಳಿರುತ್ತಾರೆ. ಆದ್ದರಿಂದ, ಈ ಸಾಕ್ಷಿಯನ್ನು ನಂಬಬಹುದಾಗಿದೆ. ಅಭಿಯೋಗವು ಮೇಲೆ ತಿಳಿಸಿದ ಸಾಕ್ಷಿಯಿಂದ ಹಾಗೂ ದಿನಾಂಕ: 10.10.2001 ರಂದು ಅರ್ಜಿದಾರರ ವಾಹನ ನೊಂದಣಿ ಸಂಖ್ಯೆ KA.14.L.6529 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಅರಣ್ಯ ಇಲಾಖೆಯವರು ಜಪ್ತು ಮಾಡಿರುತ್ತಾರೆಂದು ಸಾಕ್ಷಿ ಹಾಗೂ ನಿಶಾನೆಗಳಿಂದ ದೃಢಪಟ್ಟಿರುವುದರಿಂದ ಪರಿಶೀಲನಾಂಶ -1 ನ್ನು ಗುಣಾತ್ಮಕವಾಗಿ ಪರಿಶೀಲಿಸಲಾಗಿದೆ.

**ವಿವಾದಾಂಶ-2:** ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ವಾಹನ ಹೀರೋಹೊಂಡ ಬೈಕ್ ನೊಂದಣಿ ಸಂಖ್ಯೆ KA.14.L.6529 ನ ಮಾಲೀಕರಾದ ಶ್ರೀ ಎ.ಕೆ.ದೇವದಾಸ್, ತೀರ್ಥಹಳ್ಳಿ ಇವರಿಗೆ ನೋಟೀಸ್ ನೀಡಿದ್ದು, ಈ ಬಗ್ಗೆ ಪ್ರಾಧಿಕಾರಕ್ಕೆ ಉತ್ತರವನ್ನು ಸಲ್ಲಿಸಿರುತ್ತಾರೆ. ಅಲ್ಲದೇ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರದಲ್ಲಿ ನಡೆದ ವಿಚಾರಣೆಗೆ ಅವರ ನ್ಯಾಯವಾದಿಗಳು ಹಾಜರಾಗಿರುತ್ತಾರೆ, ಆದಕಾರಣ ಕರ್ನಾಟಕ ಅರಣ್ಯ ಕಾಯಿದೆ 1963 ರ ಪ್ರಕಾರ ಸೆಕ್ಷನ್ 71(ಬಿ) ಪ್ರಕಾರ ವಾಹನದ ಮಾಲೀಕರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ.ಆದಕಾರಣ ಅಂಶ-2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ವಿವಾದಾಂಶ- 3:** ಇನ್ನು ವಿವಾದಾಂಶ-3 ರ ಬಗ್ಗೆ ವಾಹನ ಮಾಲೀಕರಾದ ಶ್ರೀ ಎ.ಕೆ. ದೇವದಾಸ್ ಇವರು ಈ ಪ್ರಾಧಿಕಾರದಲ್ಲಿ ದಿನಾಂಕ:27.08.2005 ರಂದು ನುಡಿದ ಸಾಕ್ಷ್ಯದಲ್ಲಿ ತಾನು 2001 ನೇ ಸಾಲಿನಿಂದ ಹೀರೋಹೊಂಡ ಬೈಕ್ ನೊಂದಣಿ ಸಂಖ್ಯೆ KA.14.L.6529 ರ ಮಾಲೀಕ ಹಾಗೂ ಅಂಬಳಕೆ ವಾಸಿಯಾಗಿದ್ದರಿಂದ ಗಾಜನೂರು, ಮಂಡಗದ್ದೆ, ತೀರ್ಥಹಳ್ಳಿ ಮುಖಾಂತರ ಊರಿಗೆ ಹೋಗಬೇಕಾಗಿರುತ್ತದೆ. ಅದರಂತೆ, ದಿನಾಂಕ: 09.10.2001 ರಂದು ಶಿವಮೊಗ್ಗದಲ್ಲಿ ಕಾರ್ಯಕ್ರಮಕ್ಕೂ ತಾನೂ ಹಾಗೂ ತನ್ನ ಚಿಕ್ಕಪ್ಪನ ಮಗ ಶ್ರೀ ಸುಬ್ರಮಣ್ಯರವರೊಂದಿಗೆ ಖಾಸಗಿ ಕಾರ್ಯಕ್ರಮಕ್ಕೆ ಶಿವಮೊಗ್ಗಕ್ಕೆ ಬಂದಿದ್ದು, ಕಾರ್ಯಕ್ರಮ ರಾತ್ರಿ ಮುಗಿದಿದ್ದರಿಂದ ಊರಿಗೆ ಹೊರಟೆವು. ಗಾಜನೂರು ತನಿಖಾ ಠಾಣೆಯ ಸಮೀಪ ಬರುತ್ತಿರುವಾಗ್ಗೆ ತನಿಖಾ ಠಾಣೆಯಲ್ಲಿದ್ದ ಸಮವಸ್ತ್ರಭರಿತ ಸಿಬ್ಬಂದಿಯವರು ತಡೆದು 500.00 ರೂ ಹಣವನ್ನು ಕೊಡುವಂತೆ ಕೇಳಿದರು, ನಾವು ಕೊಡಲಿಲ್ಲ. ನಂತರ ತನಿಖಾ ಠಾಣೆಯ ಹಿಂದಿನ ಕಟ್ಟಡಕ್ಕೆ ಕರೆದುಕೊಂಡು ಹೋಗಿ ಕೂಡು ಹಾಕಿದರು. ಅನಂತರ ಶ್ರೀಗಂಧದ ಕಳ್ಳ ಸಾಗಾಣಿಕೆಯ ಮೇಲೆ ಘನ ನ್ಯಾಯಾಲಯಕ್ಕೆ ಹಾಜರುಪಡಿಸಿದರು. ದಿನಾಂಕ:10.10.2001 ರಂದು ಬೆಳಿಗ್ಗೆ ಸುಮಾರು 8.00 ಘಂಟೆಯ ಹೊತ್ತಿಗೆ ದ್ವಿಚಕ್ರ ವಾಹನದಲ್ಲಿ ತೀರ್ಥಹಳ್ಳಿ ಕಡೆಯಿಂದ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದೆವು ಎಂದು ಗಾಜನೂರು ಅರಣ್ಯ ಇಲಾಖೆಯ ಸಿಬ್ಬಂದಿಯವರು ಹೇಳುವುದನ್ನು ಹಾಗೂ ದಿನಾಂಕ:10.10.2001 ರಂದು ತನಿಖಾ ಠಾಣೆಯ ಮೂಲಕ 18 ಕೆ.ಜಿ. ಶ್ರೀಗಂಧದ ಕೇಸ್ ಮಾಡಿರುವುದನ್ನು ಹಾಗೂ ಪಂಚನಾಮೆಯನ್ನು ಜರುಗಿಸಿ ವಾಹನ ಅಮಾನತ್ತುಪಡಿಸಿದ್ದೇವೆ ಎಂದು ಅರಣ್ಯ ಇಲಾಖೆಯವರೇ ಹೇಳುವುದು ಸುಳ್ಳೆಂದು ನುಡಿದಿರುತ್ತಾರೆ. ದ್ವಿಚಕ್ರ ವಾಹನವನ್ನು ಸ್ವಂತ ಉಪಯೋಗಕ್ಕಾಗಿ ಖರೀದಿಸಿದ್ದು, ಅರಣ್ಯ ಇಲಾಖೆಯವರು ಜಪ್ತಿ ಮಾಡಿರುವುದರಿಂದ ಜಮೀನಿನ ಹತ್ತಿರ ಓಡಾಡಲು ತುಂಬಾ ತೊಂದರೆಯಾಗುತ್ತಿದೆ. ಮಳೆ, ಬಿಸಿಲಿಗೆ ತೆರೆದು ಇಟ್ಟಿರುವುದರಿಂದ ಹಾಳಾಗುತ್ತಿದೆ. ಆದ್ದರಿಂದ ವಾಹನವನ್ನು ಬಿಟ್ಟುಕೊಡುವಂತೆ ಕೇಳಿಕೊಂಡಿರುವುದಾಗಿ ನುಡಿದಿರುತ್ತಾರೆ.

ಈ ಪಾರ್ಟಿಯನ್ನು ಪಾಟಿ ಸವಾಲು ಮಾಡಿದಾಗ 2001ನೇ ಸಾಲಿನಲ್ಲಿ ದ್ವಿಚಕ್ರ ವಾಹನ ಓಡಿಸಲು ಪರವಾನಗಿ ಪಡೆದಿದ್ದೇನೆ, ದಿನಾಂಕ:09.10.2001 ರಂದು ಅಂದಾಜು ಬೆಳಿಗ್ಗೆ 10.30. 11.00 ಘಂಟೆಗೆ ಶಿವಮೊಗ್ಗ ಗಾಂಧಿ ಬಜಾರಿನ ಅಕ್ಕನ ಮನೆಗೆ ಖಾಸಗಿ ಕಾರ್ಯಕ್ರಮಕ್ಕಾಗಿ ನಾನು ಬಂದು ಹೋದ ಬಗ್ಗೆ ದಿನಾಂಕ:19.09.2002 ರಂದು ಅರ್ಜಿ ಹಾಕುವಾಗ ತಿಳಿಸಿರುವುದಿಲ್ಲ. ಹಾಗೂ ಈ ವಿಚಾರ ಇದೇ ಪ್ರಥಮವಾಗಿ ಹೇಳುತ್ತಿದ್ದೇನೆ ಎಂದು ತಿಳಿಸಿರುತ್ತಾರೆ ಹಾಗೂ 500.00 ರೂ ಕೇಳಿದ ಬಗ್ಗೆ ಮತ್ತು ಸುಳ್ಳು ಪ್ರಕರಣದಲ್ಲಿ ತನ್ನನ್ನು ಮತ್ತು ದ್ವಿಚಕ್ರ ವಾಹನವನ್ನು ಅರಣ್ಯ ಇಲಾಖೆಯವರು ಸಿಲುಕಿಸಿದ್ದಾರೆ ಎಂದು ಸಹ ದಿನಾಂಕ:19.09.2002 ರಲ್ಲಿ ಹೇಳಿರುವುದಿಲ್ಲವೆಂಬುದನ್ನು ಒಪ್ಪಿಕೊಂಡಿರುತ್ತಾರೆ. 500.00 ರೂ ಕೇಳಿದ ಬಗ್ಗೆ ಮೇಲಾಧಿಕಾರಿಗಳಿಗೆ ತಿಳಿಸಿರುವುದಿಲ್ಲ. ದ್ವಿಚಕ್ರ ವಾಹನವನ್ನು ಲೋನ್ ಮಾಡಿ ಖರೀದಿಸಿರುತ್ತೇನೆ. ದಿನಾಂಕ: 09.10.2001 ರಂದು ತಾನು ಹಾಗೂ ಸುಬ್ರಮಣ್ಯ ಖಾಸಗಿ ಕೆಲಸಕ್ಕೆ ಶಿವಮೊಗ್ಗಕ್ಕೆ ಬರಲಿಲ್ಲ ಎನ್ನುವುದು ನಿಜವಲ್ಲ ಎಂದು, ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದನ್ನು ತಪ್ಪಿಸಿಕೊಳ್ಳುವ ಸಲುವಾಗಿ ಸುಳ್ಳು ಸಾಕ್ಷಿಯನ್ನು ಹೇಳುತ್ತಿದ್ದೇನೆ ಎನ್ನುವುದನ್ನು ನಿಜವಲ್ಲವೆಂದು ನುಡಿದಿರುತ್ತಾರೆ.

**ಅರ್ಜಿದಾರರ ಹೇಳಿಕೆಯಿಂದ ಈ ಕೆಳಕಂಡ ಹೇಳಿಕೆಗಳು ವ್ಯಕ್ತವಾಗುತ್ತವೆ.**

1. ಮೇಲ್ಕಂಡ ಅರ್ಜಿದಾರರು ಅರ್ಜಿ ಹಾಗೂ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಒಂದಕ್ಕೊಂದು ತಾಳೆಯಾಗುತ್ತಿಲ್ಲ ವ್ಯತಿರಿಕ್ತವಾಗಿದೆ.
2. ದಿನಾಂಕ:19.09.2002 ರಂದು ಸಲ್ಲಿಸಿರುವ ಅರ್ಜಿಯಲ್ಲಿ ಕಾರ್ಯಕ್ರಮಕ್ಕೆ ಬಂದು ಹೋದ ಬಗ್ಗೆ ಹಾಗೂ 500.00 ರೂ ಕೇಳಿದ ಬಗ್ಗೆ ಯಾವುದೂ ವಿಷಯ ಪ್ರಸ್ತಾಪ ಮಾಡಿಲ್ಲವಾದ್ದರಿಂದ, ನ್ಯಾಯಾಲಯದಲ್ಲಿ ಹೇಳಿರುವುದೆಲ್ಲ ಕಟ್ಟುಕಥೆಯೆಂದು ಕಂಡುಬರುತ್ತದೆ. ನಿಜವಾಗಿಯೂ ಅರ್ಜಿದಾರರು ದಿನಾಂಕ:09.10.2001 ರಂದು ಶಿವಮೊಗ್ಗದಲ್ಲಿ ನಡೆದ ಕಾರ್ಯಕ್ರಮಕ್ಕೆ ಬಂದಿದ್ದೆಯಾದರೆ, ಈ ವಿಷಯ ಮುಚ್ಚಿಡುವ ಅವಶ್ಯಕತೆಯೇ ಇರುತ್ತಿರಲಿಲ್ಲ. ಹೀಗೆ ವಿಷಯ ಮುಚ್ಚಿಟ್ಟಿರುವುದರಿಂದ ಅನುಮಾನಕ್ಕೆ ಎಡೆ ಮಾಡಿದೆ. ಹಾಗೂ ವಿಷಯ ಮುಚ್ಚಿಟ್ಟ ಬಗ್ಗೆ ಸಮಂಜಸವಾದ ಕಾರಣವನ್ನು ನ್ಯಾಯಾಲಯದಲ್ಲಿ ತಿಳಿಸದೇ ನ್ಯಾಯಾಲಯದಲ್ಲಿ ಸುಳ್ಳು ಸಾಕ್ಷಿ ಹೇಳಿ ಈ ಮೊಕದ್ದಮೆಯಲ್ಲಿ ನುಣುಚಿಕೊಳ್ಳಲು ಮಾಡಿದ ಒಳ ಸಂಚಾಗಿದೆ.
3. ಅರಣ್ಯ ಇಲಾಖೆಯವರು 500.00 ರೂ ಕೇಳಿದ ಬಗ್ಗೆ ಯಾವುದೇ ಪೋಲಿಸ್ ಅಧಿಕಾರಿಗಾಗಲೀ ಅಥವಾ ಅರಣ್ಯ ಇಲಾಖೆಯ ಹಿರಿಯ ಅಧಿಕಾರಿಗಳಲ್ಲಿ ದೂರು ನೀಡದೇ ಇರುವುದರಿಂದ, ಇವರ ಹೇಳಿಕೆ ಸತ್ಯಾಂಶದಿಂದ ಕೂಡಿಲ್ಲವಾಗಿರುವುದು ಕಂಡು ಬರುತ್ತದೆ.
4. ದಿನಾಂಕ:09.10.2001 ರಂದು ನಿಜವಾಗಿಯೂ ಅಕ್ಕನ ಮನೆ ಕಾರ್ಯಕ್ರಮಕ್ಕೆ ಬಂದಿದ್ದೆಯಾದರೇ ಅವರನ್ನು ನ್ಯಾಯಾಲಯಕ್ಕೆ ಸಾಕ್ಷಿಯಾಗಿ ಹಾಜರುಪಡಿಸಿ ಸತ್ಯವನ್ನು ಹೇಳಿಸಬಹುದಿತ್ತು. ಈ ಬಗ್ಗೆ ಯಾವುದೇ ಅಭ್ಯಂತರ ಇರಲಿಲ್ಲ. ಆದರೆ, ಈ ರೀತಿ ಮಾಡದೇ ಇರುವುದರಿಂದ ಇವರ ಹೇಳಿಕೆಗೆ ಪುಷ್ಟಿ ಬರುವುದಿಲ್ಲ ಹಾಗೂ ದಿನಾಂಕ: 19.09.2002 ರಂದು ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ತಿಳಿಸದೇ ಇರುವುದು ಪುಷ್ಟಿ ಕೊಡುತ್ತದೆ.

5. ದಿನಾಂಕ:09.10.2001 ರಂದು ಕಾರ್ಯಕ್ರಮಕ್ಕೆ ನಿಜವಾಗಿಯೂ ಹೋಗಿದ್ದರೆ, ಯಾವುದಾದರೂ ಸಾಕ್ಷ್ಯ ಹಾಗೂ ದಾಖಲಾತಿಯಿಂದ ದೃಢಪಡಿಸುವ ಸಂಪೂರ್ಣ ಹೊಣೆಗಾರಿಕೆ ಮಾಲೀಕನ ಮೇಲಿದ್ದರಿಂದ ಯಾವುದನ್ನು ನ್ಯಾಯಾಲಯದಲ್ಲಿ ಹಾಜರುಪಡಿಸದೇ ಇರುವುದರಿಂದ ಇವರ ಹೇಳಿಕೆಯಲ್ಲಿ ಸತ್ಯಾಂಶವಿರುವುದಿಲ್ಲ.
6. ಅರಣ್ಯಾಧಿಕಾರಿಗಳು ಜಪ್ತು ಮಾಡಿದ ವಾಹನದಲ್ಲಿ ಅರ್ಜಿದಾರರೇ ಆರೋಪಿಯಾಗಿದ್ದು ಕೂಡ, ಪ್ರಾಧಿಕಾರದಲ್ಲಿ ವಾಹನ ಬಿಡುಗಡೆ ಕೇಳಿ ಅರ್ಜಿ ಸಲ್ಲಿಸದೇ ಇರುವುದು ಅನುಮಾನಕ್ಕೆ ಎಡೆಮಾಡಿದೆ. ಅಲ್ಲದೇ ಈ ಪ್ರಾಧಿಕಾರದ ನೋಟೀಸ್ ಹೋದ ನಂತರವೇ ದಿನಾಂಕ:19.09.2002 ರಂದು ಅರ್ಜಿ ಸಲ್ಲಿಸಿರುವುದು ಕಂಡುಬಂದಿದೆ. ಅಲ್ಲಿಯೂ ಕೂಡ ಸುಮಾರು 11 ತಿಂಗಳು ಸಮಯವೇಕೆ ಬೇಕಾಯಿತೆಂಬುದರ ಬಗ್ಗೆ ವಿವರವನ್ನು ಸಮರ್ಪಕವಾಗಿ ಕಾರಣವನ್ನು ನೀಡಿಲ್ಲ. ಇದರಿಂದ ಅರ್ಜಿದಾರರು ಹೇಳಿಕೆಯಲ್ಲಿ ನೀಡಿರುವುದು ಕಪೋಲ ಕಲ್ಪಿತ ಹಾಗೂ ಕಟ್ಟುಕಥೆ ಎಂದು ದೃಢಪಡುತ್ತದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ವಾಹನ ಮಾಲೀಕರು ಸಾಕ್ಷ್ಯ ನುಡಿದಿರುವುದಕ್ಕೂ ನ್ಯಾಯಾಲಯಕ್ಕೆ ಹಾಜರುಪಡಿಸಿದ ದಾಖಲಾತಿಗಳಿಗೂ ತಾಳೆಯಿಲ್ಲದೇ ಇರುವುದರಿಂದ ವಾಹನ ಬಿಡುಗಡೆ ಮಾಡಿಕೊಳ್ಳಲು ಸೃಷ್ಟಿಸಿದ ಕಟ್ಟುಕಥೆ ಎಂದು ಹಾಗೂ ನೇರವಾಗಿ ಆರ್‌ಸಿ ಮಾಲೀಕರೇ ಶಾಮೀಲಾಗಿ ಈ ಕೃತ್ಯ ಎಸಗಿರುತ್ತಾರೆಂದು ಸಾಬೀತಾಗುತ್ತದೆ.

ಮಾಲೀಕರು ವಾಹನವನ್ನು ಸರ್ಕಾರಿ ಸ್ವತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿ ಇಲ್ಲದೆ ಕಳ್ಳ ಸಾಗಾಣಿಕೆಗೆ ಬಳಸಿದಾಗ, ಅದು ತಮ್ಮ ಗಮನಕ್ಕೆ ಬಾರದಂತೆ ಕೃತ್ಯ ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಾಧಾರಗಳನ್ನು ವಾಹನದ ಮಾಲೀಕರು ನೀಡಿರುವುದಿಲ್ಲ. ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ 71(ಬಿ) ರೀತ್ಯಾ ಸಾಬೀತುಪಡಿಸುವ ಸಂಪೂರ್ಣ ಜವಾಬ್ದಾರಿ ವಾಹನ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಈ ನಿಟ್ಟಿನಲ್ಲಿ ವಾಹನದ ಮಾಲೀಕರು ವಿಫಲರಾಗಿರುತ್ತಾರೆ.

ಹಾಲಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿ ಮತ್ತು ನೀಡಿದ ಸಾಕ್ಷಿದಾರರು ಈ ನ್ಯಾಯಾಲಯದಲ್ಲಿ ನುಡಿದ ಸಾಕ್ಷಿಯನ್ನು ಗಮನಿಸಿದಾಗ, ಒಂದಕ್ಕೊಂದು ತಾಳೆಯಿಲ್ಲದೇ ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಟಿಸಿದ ಕಟ್ಟುಕಥೆ ಎಂದು ಹಾಗೂ ದಿನಾಂಕ: 10.10.2001 ರಂದು ಹೀರೋ ಹೊಂಡಾ ನೊಂದಣಿ ಸಂಖ್ಯೆ KA.14.L.6529 ರಲ್ಲಿ ಶ್ರೀಗಂಧವನ್ನು ವಾಹನ ಮಾಲೀಕರೇ ನೇರವಾಗಿ ಪಾಲ್ಗೊಂಡು ಈ ಅಕ್ರಮ ಕೃತ್ಯದಲ್ಲಿ ತೊಡಗಿದ್ದರೆಂದು ಅಭಿಪ್ರಾಯ ಪಡುತ್ತೇನೆ.

ಈ ಮೇಲಿನ ಎಲ್ಲಾ ಕಾರಣದಿಂದ 3ನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಲಾಗಿದೆ. ಪರಿಶೀಲನಾಂಶ-4ಕ್ಕೆ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ, ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ.ಎ.ಎನ್.ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು, 1963 ರ ಕರ್ನಾಟಕ ಅರಣ್ಯ ಅಧಿನಿಯಮ 71ಎ ಪ್ರಕಾರ, ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಹೀರೋಹೊಂಡ ಸ್ಪ್ಲೆಂಡರ್ ನೊಂದಣಿ ಸಂಖ್ಯೆ KA.14.L.6529 ಎಂದು, ಇಂಜೀನ್ ಸಂಖ್ಯೆ 00G-18-E17499, ಛಾಸ್ಸಿ ಸಂಖ್ಯೆ 00G-20-F-17278 ಮತ್ತು 18.00 ಕೆ.ಜಿ.ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ. ಮುಟ್ಟುಗೋಲು ಹಾಕಿಕೊಂಡ ಶ್ರೀಗಂಧವನ್ನು ಈ ಪ್ರಕರಣದಲ್ಲಿ ಆಪಾದಿತರ ಮೇಲೆ ನಡೆಯುತ್ತಿರುವ ಕ್ರಿಮಿನಲ್ ಕೇಸ್ ಮುಕ್ತಾಯವಾಗುವವರೆವಿಗೂ ಕಾಯ್ದುಕೊಳ್ಳುವಂತೆ ಆದೇಶಿಸಲಾಗಿದೆ.

ಈ ಆದೇಶವು ಈ ದಿನಾಂಕ:07.01.2006 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಸದರಿ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸದೇ ಇದ್ದರೆ, ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವು ದಿನಾಂಕ: 07.01.2006 ರಂದು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ತೆರೆದ ನ್ಯಾಯಾಲಯದಲ್ಲಿ ಉದ್ಘೋಷಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ವಿಚಾರಣೆ ಮಾಡಲ್ಪಟ್ಟ ಸಾಕ್ಷಿಗಳು:**

1. **ಅಭಿಯೋಜನಾ ಪರ ಸಾಕ್ಷಿ:**

ಅ) ಶ್ರೀ ಎ.ವಿ. ಸತೀಶ್, ವನಪಾಲಕ (ಹಿಂದಿನ) ಸಕ್ರೆಬೈಲು ವನ್ಯಜೀವಿ ವಲಯ ಹಾಗೂ ಪ್ರಸ್ತುತ ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯ ವಲಯ, ಪಾಂಡವಪುರ — ಪಿಡಬ್ಲ್ಯೂ-1

2. **ಅರ್ಜಿದಾರರ ಪರ ಸಾಕ್ಷಿಗಳು:**

ಅ) ಶ್ರೀ ದೇವದಾಸ್, ಅಂಬಳಿಕೆ ವಾಸಿ ತೀರ್ಥಹಳ್ಳಿ ತಾಲ್ಲೂಕು — ಡಿಡಬ್ಲ್ಯೂ-1

3. **ಅಭಿಯೋಜನಾ ಪರ ನಿಶಾನಿಸಲ್ಪಟ್ಟ ದಾಖಲೆಗಳು:**

| | | | |
|---|---|---|---|
| 1. | ಸ್ಥಳ ಮಹಜರ್ | - | ನಿಶಾನೆ ಪಿ 1 |
| 2. | ಪ್ರಥಮ ಮಾಹಿತಿ ವರದಿ | - | ನಿಶಾನೆ ಪಿ 2 |
| 3. | ಅಮಾನತ್ತು ವರದಿ | - | ನಿಶಾನೆ ಪಿ 3 |
| 4. | ಹೀರೋಹೊಂಡಾ ಸ್ಪ್ಲೆಂಡರ್ ಬೈಕ್ ನೊಂದಣಿಸಂಖ್ಯೆ KA.14.L.6529 | - | MO 1 |
| 5. | ಶ್ರೀಗಂಧದ ತುಂಡುಗಳು 10.00 ಕೆ.ಜಿ. | - | MO 2 |
| 6. | ಶ್ರೀಗಂಧದ ಚಕ್ಕೆಗಳು 8.00 ಕೆ.ಜಿ. | - | MO 3 |

4. ಅರ್ಜಿದಾರರ ಪರ ಗುರುತಿಸಲ್ಪಟ್ಟ ದಾಖಲೆಗಳು:

-ಇಲ್ಲ-

ಜಿ.ಎ.ಎನ್. ಕರ್ಕೀಕರ್

ಪಿ.ಆರ್. 126 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ವನ್ಯಜೀವಿ ವಿಭಾಗ, ಶಿವಮೊಗ್ಗ.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಖ್ಯೆ:ಎ3(ಬಿ1) ಅಮೊ: ಎತ್ತುಗಳು: ಬೀಟೆ:2000-01 ದಿನಾಂಕ: 31ನೇ ಡಿಸೆಂಬರ್ 2005**

**ಉಪಸ್ಥಿತರು** : ಶ್ರೀ ಜಿ.ಎ.ಎನ್. ಕರ್ಕಿಕರ್, ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಫಿರ್ಯಾದಿ** : ವಲಯ ಅರಣ್ಯಾಧಿಕಾರಿ ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು. (ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು** : ಶ್ರೀ ಪರಮೇಶಿ ಬಿನ್ ಕುಂಟಪ್ಪ, ಮತ್ತು ಕೀನ್ಯಾನಾಯ್ಕ ಬಿನ್ ಹಾಲಾನಾಯ್ಕ, ಹೊಸಕೊಪ್ಪ ಗ್ರಾಮ, ಶಿವಮೊಗ್ಗ ತಾಲ್ಲೂಕು. ( ಪರವಾಗಿ ಶ್ರೀ ಎಸ್. ರವಿಕುಮಾರ್, ವಕೀಲರು, ಶಿವಮೊಗ್ಗ)

**ಪ್ರಕರಣದ ಹಿನ್ನೆಲೆ:**

ದಿನಾಂಕ:14.12.2001 ರಂದು ಸಂಜೆ ಸುಮಾರು 7.00 ಘಂಟೆಯ ಸಮಯದಲ್ಲಿ ಸಕ್ರೆಬೈಲು ವನ್ಯಜೀವಿ ವಲಯದ ವನಪಾಲಕರು ಹಾಗೂ ಸಿಬ್ಬಂದಿಗಳು ಖಚಿತ ವರ್ತಮಾನದ ಮೇರೆಗೆ ಬೇಡನಕಲ್ಲಟ್ಟಿ ಅರಣ್ಯ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಕತ್ತಲೆಹಳ್ಳದ ಕಾಲುದಾರಿಯ ಬಳಿ ಕಾಯುತ್ತಿರುವಾಗ, ಕತ್ತಲಲ್ಲಿ ಎತ್ತುಗಳ ಸಹಾಯದಿಂದ ತುಂಡುಗಳನ್ನು ಎಳೆಸಿಕೊಂಡು ಬರುತ್ತಿರುವ ಶಬ್ದ ಕೇಳಿಬಂದ ತಕ್ಷಣ ಇಲಾಖೆಯವರಲ್ಲಿದ್ದ ಕೈಬ್ಯಾಟರಿಯಿಂದ ಶಬ್ದ ಬಂದ ಕಡೆ ಬೆಳಕು ಚೆಲ್ಲಿದಾಗ 2 ಜನ ಆಸಾಮಿಗಳು 2 ಜೊತೆ ಎತ್ತುಗಳಿಗೆ ನೊಗ ಕಟ್ಟಿ ಅದರ ಸಹಾಯದಿಂದ ತುಂಡುಗಳನ್ನು ಎಳೆಸಿಕೊಂಡು ಬರುತ್ತಿರುವುದನ್ನು ಕಂಡು ಅವರನ್ನು ವಿಚಾರಿಸಲು ಮುಂದಾದಾಗ ಖಾಕಿ ವಸ್ತ್ರಧಾರಿಗಳನ್ನು ಕಂಡ ಆಸಾಮಿಗಳು ಎತ್ತುಗಳು ಮತ್ತು ತುಂಡುಗಳನ್ನು ಬಿಟ್ಟು ಓಡಲು ಪ್ರಾರಂಭಿಸಿದಾಗ ಸಿಬ್ಬಂದಿಗಳು ಬೆನ್ನಟ್ಟಿದಾಗ ಆಸಾಮಿಗಳು ಕೈಗೆ ಸಿಗದೆ ಪರಾರಿಯಾಗಿರುವುದಾಗಿ ವಲಯ ಅರಣ್ಯಾಧಿಕಾರಿಗಳ ವರದಿ ಹಾಗೂ ಸ್ಥಳ ಮಹಜರ್‌ನಿಂದ ತಿಳಿದು ಬರುತ್ತದೆ.

ಎತ್ತುಗಳ ನೊಗಕ್ಕೆ ಕಟ್ಟಿದ ತುಂಡುಗಳನ್ನು ಪರಿಶೀಲಿಸಿ ನೋಡಿದಾಗ ಅವುಗಳು ಬೀಟೆ ತುಂಡುಗಳಾಗಿದ್ದು, ಅವುಗಳ ತುದಿ ಬುಡಗಳನ್ನು ಗರಗಸದಿಂದ ಕೊಯ್ದು ಮಾಡಿದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಇಲ್ಲದಿರುವುದನ್ನು ಕಂಡು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ 2 ಬೀಟೆತುಂಡುಗಳು 0.544 ಘ.ಮೀ.ನ್ನು ಮತ್ತು ಇವುಗಳ ಸಾಗಾಣಿಕೆಗೆ ಬಳಸಿದ 3 ಎತ್ತುಗಳು ಮತ್ತು ಒಂದು ಆಕಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಅರಣ್ಯ ಮೊಕದ್ದಮೆ ಸಂಖ್ಯೆ 86/2001-02 ನ್ನು ದಾಖಲು ಮಾಡಿರುತ್ತಾರೆ. ಬೀಟೆ ತುಂಡುಗಳು ಹಾಗೂ 3 ಎತ್ತುಗಳು ಮತ್ತು 1ಆಕಳನ್ನು ಕರ್ನಾಟಕ ಅರಣ್ಯ ಕಾಯಿದೆ 71(ಎ) ರಂತೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರಕ್ಕೆ ವಲಯ ಅರಣ್ಯಾಧಿಕಾರಿ ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರು ಹಾಜರುಪಡಿಸಿದ್ದು, ಸದರಿ ಬೀಟೆ ತುಂಡುಗಳು ಸುರಕ್ಷಿತವಾಗಿ ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಸುಪರ್ದಿನಲ್ಲಿ ಮುಂದಿನ ಆದೇಶವಾಗುವವರೆಗೂ ಸುರಕ್ಷಿತವಾಗಿ ಇಟ್ಟುಕೊಳ್ಳಲು ಆದೇಶಿಸಲಾಗಿರುತ್ತದೆ.

ಮುಂದುವರಿದು ಎತ್ತುಗಳ ಮಾಲೀಕತ್ವದ ಬಗ್ಗೆ ರುಜುವಾತುಪಡಿಸಲು ಯಾರೂ ಬಾರದೇ ಇದ್ದುದರಿಂದ ನೀರು-ಮೇವು ಮೇಲ್ವಿಚಾರಣೆಯ ಕಷ್ಟ ಸಾಧ್ಯತೆಗಳನ್ನು ಮನಗಂಡು ಪ್ರಾಧಿಕಾರ ಕಾನೂನು ರೀತಿ ಬಹಿರಂಗ ಹರಾಜಿನ ಮೂಲಕ ಎತ್ತುಗಳು ಮತ್ತು ಆಕಳನ್ನು ಹರಾಜು ಮಾಡಿ, ಹರಾಜಿನಿಂದ ಬಂದ ಮೊತ್ತವನ್ನು ಮೊಕದ್ದಮೆ ಇತ್ಯರ್ಥವಾಗುವವರೆಗೆ ಠೇವಣಿಯಾಗಿಟ್ಟುಕೊಳ್ಳಲು ಆದೇಶಿಸಿರುತ್ತದೆ. ಪ್ರಾಧಿಕಾರದ ಆದೇಶದಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ಉಪವಿಭಾಗ, ಶಿವಮೊಗ್ಗ ಇವರು ಎತ್ತುಗಳು ಮತ್ತು ಆಕಳಿನ ಬೆಲೆಯನ್ನು ಪಶುವೈದ್ಯಾಧಿಕಾರಿಯವರಿಂದ ನಿಗದಿಪಡಿಸಿಕೊಂಡು ಸ್ಥಳೀಯವಾಗಿ ಮತ್ತು ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸಿ ದಿನಾಂಕ:22.12.2001 ರಂದು ಹರಾಜು ಮಾಡಿರುತ್ತಾರೆ. ಹರಾಜಿನಲ್ಲಿ 3 ಎತ್ತುಗಳು ಮತ್ತು 1 ಆಕಳ ಹರಾಜಿನಿಂದ ಒಟ್ಟು ರೂ. 8122.00 ಬಂದಿದ್ದು, ಇದನ್ನು ಡಿಸೆಂಬರ್ 21 ನೇ ಮಾಹೆಯ ಸಕ್ರೆಬೈಲು ವನ್ಯಜೀವಿ ವಲಯದ ನಗದು ಪುಸ್ತಕದ ಡಿ.ಆರ್. ಐಟಂ ನಂಬರ್ 10-10 ಮತ್ತು 11-11.ದಿನಾಂಕ:22.12.2001ರಲ್ಲಿ ಠೇವಣಿಯನ್ನಾಗಿ ಇಡಲಾಗಿರುತ್ತದೆ.

ಈ ಮಧ್ಯೆ ದಿನಾಂಕ: 21.12.2001 ರಂದು ಎತ್ತುಗಳ ಮತ್ತು ಆಕಳಿನ ಮಾಲೀಕರೆಂದು ಶ್ರೀ ಪರಮೇಶಿ ಬಿನ್ ಕುಂಟಪ್ಪ ಹಾಗೂ ಶ್ರೀ ಕೀನ್ಯಾನಾಯ್ಕ ಬಿನ್ ಹಾಲಾನಾಯ್ಕ, ಹೊಸಕೊಪ್ಪ ಗ್ರಾಮ ಇವರುಗಳು ತಮ್ಮ ವಕೀಲರ ಮುಖಾಂತರ ಎತ್ತುಗಳು ಮತ್ತು ಆಕಳನ್ನು ಮಧ್ಯಂತರ ಆದೇಶದ ಮೇಲೆ ಬಿಡುಗಡೆಗೊಳಿಸಲು ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅರ್ಜಿದಾರರು ವಕೀಲರ ಮುಖಾಂತರ ಸಲ್ಲಿಸಿದ ಅರ್ಜಿಗೆ ಸಹಾಯಕ ಅಭಿಯೋಗ ನಿರ್ದೇಶಕರು ತಕರಾರು ಅರ್ಜಿ ಸಲ್ಲಿಸಿರುತ್ತಾರೆ. ಅನಂತರ ಈ ಪ್ರಕರಣದ ವಿಚಾರಣಾ ಕಾಲಕ್ಕೆ ಅಭಿಯೋಗವು ಪ್ರಾಸಿಕ್ಯೂಷನ್ ಪರ ಒಂದು ಸಾಕ್ಷಿಯನ್ನು ವಿಚಾರಣೆ ಮಾಡಿರುತ್ತದೆ. ಸದರಿ ವಿಚಾರಣೆಯಿಂದ ಮತ್ತು ಹಾಜರುಪಡಿಸಿದ ಸಾಕ್ಷ್ಯಾಧಾರದಿಂದ ದಿನಾಂಕ:14.12.2001 ರಂದು ಎತ್ತುಗಳ ಮೂಲಕ ಸಾಗಾಣಿಕೆ ಮಾಡುತ್ತಿದ್ದ 0.544 ಘ.ಮೀ. 2 ಬೀಟೆ ತುಂಡುಗಳು ಅಕ್ರಮ ಸಾಗಾಣಿಕೆ ಎಂದು ರುಜುವಾತಾಗಿರುತ್ತದೆ.

ಮುಂದುವರಿದು, ಅರ್ಜಿದಾರರ ಪರ ವಕೀಲರಿಗೆ ಮತ್ತು ಅರ್ಜಿದಾರರಿಗೆ ಈ ನ್ಯಾಯಾಲಯದಿಂದ ದಿನಾಂಕ:18.06.2004, 01.07.2004, 15.07.2004, 20.08.2004, 04.09.2004,09.11.2004, 25.11.2004,14.12.2004, 21.12.2004, 20.01.2005, 02.02.2005, 31.03.2005, 05.04.2005, 25.04.2005, 02.05.2005, 16.05.2005, 24.05.2005, 01.06.2005, 22.06.2005, 19.07.2005, 25.07.2005, 17.08.2005, 22.08.2005, 30.08.2005, 17.09.2005, 11.10.2005, ರವರೆಗೆ ನೋಟೀಸುಗಳನ್ನು ನೀಡಲಾಗಿರುತ್ತದೆ. ಯಾರೊಬ್ಬರೂ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರವನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ನ್ಯಾಯಾಲಯಕ್ಕೆ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುತ್ತಾರೆ. ಮತ್ತು ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ ಎತ್ತುಗಳು ಮತ್ತು ಆಕಳು ಅಕ್ರಮವಾಗಿ ಅರಣ್ಯ ಉತ್ಪನ್ನಗಳಾದ ಬೀಟೆ ತುಂಡುಗಳನ್ನು ಕಳ್ಳ ಸಾಗಾಣಿಕೆಯಲ್ಲಿ ಸಾಗಿಸಲು ತೊಡಗಿದ್ದವು ಎಂದು ದೃಢಪಟ್ಟಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದ್ದೇನೆ.

**ಆದೇಶ**

ಈ ಮೇಲ್ಕಂಡ ವಿದ್ಯುಮಾನಗಳಿಗೆ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು, 1963 ರ ಕರ್ನಾಟಕ ಅರಣ್ಯ ಅಧಿನಿಯಮ 71ಎ ಪ್ರಕಾರ, 2 ಬೀಟೆ ತುಂಡುಗಳು 0.544 ಘ. ಮೀ. ಹಾಗೂ ಈ ಮೊಕದ್ದಮೆಯಲ್ಲಿ ಸಿಲುಕಿದ 3 ಎತ್ತುಗಳು ಮತ್ತು 1ಆಕಳನ್ನು ಈಗಾಗಲೇ ದಿನಾಂಕ:22.12.2001 ರಂದು ಬಹಿರಂಗ ಹರಾಜು ಮಾಡಿ ಅದರಿಂದ ಬಂದ ಮೊತ್ತ ರೂ. 8122.00 (ಎಂಟುಸಾವಿರದ ಒಂದು ನೂರ ಇಪ್ಪತ್ತೆರಡು ಮಾತ್ರ) ಗಳನ್ನು ಠೇವಣಿಯಾಗಿಟ್ಟಿರುವುದನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ಈ ಠೇವಣಿ ಹಣವನ್ನು ಸರ್ಕಾರಕ್ಕೆ ರಾಜಸ್ವ ಹಣವನ್ನಾಗಿ ನಗದು ಲೆಕ್ಕಕ್ಕೆ ತೆಗೆದುಕೊಳ್ಳಲು ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಅರಣ್ಯ ಉತ್ಪನ್ನ ಮತ್ತು ಠೇವಣಿ ಹಣ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಹೊರಡಿಸಿದ ದಿನ ಅಂದರೆ ದಿನಾಂಕ: 31.12.2005 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಸದರಿ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗೆ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸದೇ ಇದ್ದರೆ, ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ವಿಚಾರಣೆ ಮಾಡಲ್ಪಟ್ಟ ಸಾಕ್ಷಿಗಳು:**

1. **ಅಭಿಯೋಜನಾ ಪರ ಸಾಕ್ಷಿ:**

ಅ) ಶ್ರೀ ಎ.ವಿ. ಸತೀಶ, ಹಿಂದಿನ ವನಪಾಲಕರು, ಸಕ್ರೆಬೈಲು ವನ್ಯಜೀವಿ ವಲಯ ಗಾಜನೂರು
ಪ್ರಸ್ತುತ ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯ ವಲಯ, ಪಾಂಡವಪುರ

2. **ನಿಶಾನಿಸಲ್ಪಟ್ಟ ದಾಖಲೆಗಳು:**

| | | | |
|---|---|---|---|
| 1. | ಸ್ಥಳ ಮಹಜರ್ | - | ನಿಶಾನೆ ಪಿ 1 |
| 2. | ಪ್ರಥಮ ಮಾಹಿತಿ ವರದಿ | - | ನಿಶಾನೆ ಪಿ 2 |
| 3. | ಅಮಾನತ್ತು ವರದಿ | - | ನಿಶಾನೆ ಪಿ 3 |
| 4. | 2 ಬೀಟೆ ತುಂಡುಗಳು 0.544 ಘ.ಮೀ | - | MO 1&2 |

3. **ಅರ್ಜಿದಾರರ ಪರ ಸಾಕ್ಷಿ ಹಾಗೂ ಗುರುತಿಸಲ್ಪಟ್ಟ ದಾಖಲೆಗಳು:**

-ಇಲ್ಲ-

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 127

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತಜ್ಞಾಪನ

**ನಂ. ಎಲ್. ಎನ್. ಡಿ (ಎನ್) ಸಿ. ಆರ್. 112/02-03, ದಿನಾಂಕ: 12ನೇ ಡಿಸೆಂಬರ್ 2005**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಗೆಜ್ಜಗದಹಳ್ಳಿ ಗ್ರಾಮದ ಸ.ನಂ. 11ರಲ್ಲಿ 2.00 ಎಕರೆ ಜಮೀನನ್ನು ಸಾರ್ವಜನಿಕ ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ: ಆರ್. ಡಿ. 11 ಎಲ್. ಜಿ.ಬಿ. 2005, ದಿನಾಂಕ:25.10.2005.
2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: 223/02 .03, 72/04-05, ದಿನಾಂಕ: 28.7.2004

ಗೆಜ್ಜಗದ ಹಳ್ಳಿ ಗ್ರಾಮಸ್ಥರು ಮನವಿ ಸಲ್ಲಿಸಿ ಗೆಜ್ಜಗದಹಳ್ಳಿ ಗ್ರಾಮದ ಸಾರ್ವಜನಿಕರಿಗೆ ಸರ್ವೆ ನಂಬರ್ 11 ರಲ್ಲಿ ಇರುವ ಸರ್ಕಾರಿ ಜಮೀನನ್ನು ಸಾರ್ವಜನಿಕ ಸ್ಮಶಾನಕ್ಕಾಗಿ ಕಾಯ್ದಿರಿಸಬೇಕೆಂದು ಮನವಿ ಸಲ್ಲಿಸಿರುತ್ತಾರೆ.

ಸದರಿ ಮನವಿಯಲ್ಲಿನ ಅಂಶಗಳನ್ನು ಪರಿಶೀಲಿಸಿ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಉಲ್ಲೇಖ (2) ರ ಪತ್ರದಲ್ಲಿ ತಮ್ಮ ವರದಿ ನೀಡಿ ಗೆಜ್ಜಗದಹಳ್ಳಿ ಸ.ನಂ. 11 ರ ಸರ್ಕಾರಿ ಗೋಮಾಳ ಜಮೀನು ಆಗಿದ್ದು ಹಾಲಿ ಗೆಜ್ಜಗದ ಹಳ್ಳಿ ಗ್ರಾಮದಲ್ಲಿ ಸುಮಾರು 150 ಮನೆಗಳಿದ್ದು ಇವರ ಸ್ಮಶಾನ ಚಿಕ್ಕದಾಗಿರುವುದರಿಂದ 2.00 ಎಕರೆ ಜಮೀನು ಕಾಯ್ದಿರಿಸಬಹುದೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಬಗ್ಗೆ ದಿನಾಂಕ:23.11.2004 ಮತ್ತು 13.6.2005 ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಪ್ರಶ್ನಿತ ಜಮೀನನ್ನು ಗೋಮಾಳದಿಂದ ತಗ್ಗಿಸಿ ಸಾರ್ವಜನಿಕ ಸ್ಮಶಾನಕ್ಕಾಗಿ ಕಾಯ್ದಿರಿಸಲು ಆದೇಶ ಕೋರಲಾಗಿತ್ತು.

ಉಲ್ಲೇಖ(1) ರ ಸರ್ಕಾರದ ಪತ್ರದಲ್ಲಿ ಸರ್ಕಾರವು ಗೆಜ್ಜಗದಹಳ್ಳಿ ಗ್ರಾಮದ ಸ.ನಂ. 11 ರಲ್ಲಿ 2.00 ಎಕರೆ ಗೋಮಾಳ ಜಮೀನನ್ನು ಭೂಕಂದಾಯ ನಿಯಮಗಳು 1966 ನಿಯಮ 97 (4) ರಡಿ ಗೋಮಾಳ ಶೀರ್ಷಿಕೆಯಿಂದ ವಿರಹಿತಗೊಳಿಸಿ ಕರ್ನಾಟಕ ಭೂ ಅಧಿನಿಯಮ 1964 ಕಲಂ 71 ರ ಪ್ರಕಾರ ಸಾರ್ವಜನಿಕ ಸ್ಮಶಾನಕ್ಕಾಗಿ ಕಾಯ್ದಿರಿಸಲು ಅನುಮೋದನೆ ನೀಡಲಾಗಿದ್ದು ಈ ಕೆಳಕಂಡಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ವಿವರಿಸಿರುವ ಕಾರಣಗಳ ಮೇರೆಗೆ ಉಲ್ಲೇಖ(1) ರ ಸರ್ಕಾರದ ಆದೇಶದ ರೀತ್ಯಾ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಗೆಜ್ಜಗದಹಳ್ಳಿ ಗ್ರಾಮದ ಸ.ನಂ. 11ರಲ್ಲಿ 2.00 ಎಕರೆ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966 ನಿಯಮ 97 (4) ರಡಿ ಗೋಮಾಳದ ಶೀರ್ಷಿಕೆಯಿಂದ ವಿರಹಿತಗೊಳಿಸಿ ಕರ್ನಾಟಕ ಭೂ ಅಧಿನಿಯಮ 1964 ಕಲಂ 71 ರ ಪ್ರಕಾರ ಸಾರ್ವಜನಿಕ ಸ್ಮಶಾನಕ್ಕಾಗಿ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಿದೆ.

**ಷರತ್ತುಗಳು**

1) ಸದರಿ ಜಮೀನಿನ ಉಸ್ತುವಾರಿಯನ್ನು ದಾಸನಪುರ ಗ್ರಾಮ ಪಂಚಾಯಿತಿ ನಿರ್ವಹಿಸತಕ್ಕದ್ದು ಹಾಗೂ ಕಂದಾಯ ದಾಖಲೆಯಲ್ಲಿ ನಮೂದಿಸುವುದು.
2) ಸ್ಮಶಾನದಲ್ಲಿ ಯಾವುದೇ ಕಟ್ಟಡ ಇತರೆ ಯಾವುದೇ ಕಾರ್ಯವನ್ನು ನಿರ್ವಹಿಸಬೇಕಾದಲ್ಲಿ ತಹಶೀಲ್ದಾರ್‌ರವರ ಪೂರ್ವಾನುಮತಿ ಪಡೆಯತಕ್ಕದ್ದು.
3) ಸದರಿ ಸ್ಮಶಾನವನ್ನು ಸುತ್ತಮುತ್ತಲಿನ ಗ್ರಾಮದ ಎಲ್ಲಾ ಜನಾಂಗದ ಅಂತ್ಯ ಕ್ರಿಯೆಗೆ ಉಪಯೋಗಿಸತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 128

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಸಿಆರ್-21:2006, ದಿನಾಂಕ: 18ನೇ ಜನವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಅರ್ಜಿದಾರರು:
1. ಶ್ರೀಮತಿ ಲಲಿತಾ ಗಂಡ ಶಿವು ರಾಠೋಡ
2. ರೇಶಮಾ ತಂದೆ ಶಿವು ರಾಠೋಡ
3. ರಾಹುಲ ತಂದೆ ಶಿವು ರಾಠೋಡ
ವಾಸ-ಬೂತನಾಳ ತಾಂಡಾ ಜಿಲ್ಲೆ-ಬಿಜಾಪೂರ.

ಪ್ರತಿವಾದಿಗಳು:
1. ವಿ.ಆರ್. ನಾಯಿಕ್
ಮಾಲೀಕರು-ಟೆಂಪೊ ಟ್ರಾಕ್ಸ್ ನಂ-ಕೆಎ 28:ಎಂ-4228
ಬಂಜಾರ ನಗರ, ಕೆಎಸ್‌ಆರ್‌ಟಿಸಿ ಡಿಪೋ ಹತ್ತಿರ,
ಗ್ಯಾಂಗಬೌಡಿ, ಬಿಜಾಪೂರ.
2. ದಿ ಬ್ರ್ಯಾಂಚ್ ಮ್ಯಾನೇಜರ್,
ಓರಿಯಂಟಲ್ ಇನ್ಶೂರೆನ್ಸ್ ಕಂ:ಲಿ, ಬಿಜಾಪೂರ.

**ಪ್ರಕಟಣೆ**

ಶ್ರೀ:ಶ್ರೀಮತಿ 1) ಲಲಿತಾ ಗಂಡ ಶಿವು ರಾಠೋಡ, (2) ರೇಶಮಾ ತಂದೆ ಶಿವು ರಾಠೋಡ, (3) ರಾಹುಲ ತಂದೆ ಶಿವು ರಾಠೋಡ ಇವರುಗಳಾದ ತಾವು ಮೃತ ಶಿವು ತಂದೆ ತುಕಾರಾಮ ರಾಠೋಡ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಿವು ತಂದೆ ತುಕಾರಾಮ ರಾಠೋಡ ಇವರು ಒಂದನೇ ಪ್ರತಿವಾದಿಗಳಾದ ವಿ.ಆರ್. ನಾಯಿಕ್ ಇವರ ಟೆಂಪೋ ಟ್ರ್ಯಾಕ್ಸ್ ನಂ-ಕೆಎ-28:ಎಂ-4228 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪೂರ ಜಿಲ್ಲೆ, ಬಿಜಾಪೂರ.

ಪಿ.ಆರ್. 129

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್-11:2006, ದಿನಾಂಕ: 17ನೇ ಜನವರಿ 2006**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಅರ್ಜಿದಾರರು:
1. ರಮಜಾನಬಿ ಗಂಡ ಮಹಿಬೂಬಸಾಬ ಚಪ್ಪರಬಂದ
2. ದಿಲಶಾದ ತಂದೆ ಮಹಿಬೂಬಸಾಬ ಚಪ್ಪರಬಂದ
3. ಅಶ್ಪಾಕ ತಂದೆ ಮಹಿಬೂಬಸಾಬ ಚಪ್ಪರಬಂದ
4. ಮೋಹಿನ ತಂದೆ ಮಹಿಬೂಬಸಾಬ ಚಪ್ಪರಬಂದ
ವಾಸ-ಹಮಾಲ ಕಾಲೋನಿ ಹತ್ತಿರ, ಯೋಗಾಪೂರ
ಬಿಜಾಪೂರ.

ಪ್ರತಿವಾದಿಗಳು:
1. ಜೋತಾನಿ ಹಿರಾನಂದ ಲಾಲಚಂದ
ಮಾಲೀಕರು-ಟ್ಯಾಂಕರ್ ನಂ:ಎಂಹೆಚ್-12:ಎಫ್‌ಎ-9870
ವಾಸ-307 ಎಂಪಿಜೆ ಚೆಂಬರ್ಸ್ ವಾಕಡೆವಾಡಿ,
ಪುಣೆ-411003
2. ದಿ ಬ್ರ್ಯಾಂಚ್ ಮ್ಯಾನೇಜರ್,
ಓರಿಯಂಟಲ್ ಇನ್ಶೂರೆನ್ಸ್ ಕಂ:ಲಿ, ಬಿಜಾಪೂರ

**ಪ್ರಕಟಣೆ**

ಶ್ರೀ:ಶ್ರೀಮತಿ ರಮಜಾನಬಿ ಗಂಡ ಮಹಿಬೂಬಸಾಬ ಚಪ್ಪರಬಂದ ಹಾಗೂ ಇತರ 3 ಜನ ಇವರುಗಳಾದ ತಾವು ಮೃತ ಮಹಿಬೂಬ ಉರ್ಫ ಮಹಿಬೂಬಸಾಬ ತಂದೆ ಹುಸೇನಸಾಬ ಚಪ್ಪರಬಂದ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಹಿಬೂಬ ಉರ್ಫ ಮಹಿಬೂಬಸಾಬ ಚಪ್ಪರಬಂದ ಇವರು ಒಂದನೇ ಪ್ರತಿವಾದಿಗಳಾದ ಜೋತಾನಿ ಹಿರಾನಂದ ಲಾಲಚಂದ ಇವರ ಟ್ಯಾಂಕರ್ ಸಂಖ್ಯೆ-ಎಂಹೆಚ್-12:ಎಫ್‌ಎ-9870 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪೂರ ಜಿಲ್ಲೆ, ಬಿಜಾಪೂರ.

ಪಿ.ಆರ್. 130

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-2 ಬಿಜಾಪುರ

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್-8:2006, ದಿನಾಂಕ: 12ನೇ ಜನವರಿ 2006**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಭಾಗಮ್ಮ ಉರ್ಫ ನಾಗಮ್ಮ ಗಂಡ ಶಿವಪ್ಪ ಮಲ್ಲೇದ
2. ಸಾವಿತ್ರಿ ತಂದೆ ಶಿವಪ್ಪ ಮಲ್ಲೇದ
   ವಾಸ-ದೇವರಹಿಪ್ಪರಗಿ, ತಾ-ಸಿಂದಗಿ, ಜಿ-ಬಿಜಾಪೂರ.

1. ಮಹಾದೇವ ತಂದೆ ಮಾರುತಿ ಸೋಲಂಕೆ ಮಾಲೀಕರು-ಟ್ರಕ್ ನಂ:ಎಂಹೆಚ್-09:ಎ-9066 ವಾಸ-ಮೇಟಗೂಡ, ತಾ-ಮಹಾಬಲೇಶ್ವರ, ಜಿಲ್ಲೆ-ಸತಾರ, (ಮಹಾರಾಷ್ಟ್ರ ರಾಜ್ಯ)

**ಪ್ರಕಟಣೆ**

ಶ್ರೀ:ಶ್ರೀಮತಿ 1) ಭಾಗಮ್ಮ ಉರ್ಫ ನಾಗಮ್ಮ ಗಂಡ ಶಿವಪ್ಪ ಮಲ್ಲೇದ, (2) ಸಾವಿತ್ರಿ ತಂದೆ ಶಿವಪ್ಪ ಮಲ್ಲೇದ ಇವರುಗಳಾದ ತಾವು ಮೃತ ಶಿವಪ್ಪ ತಂದೆ ಶಿವಲಿಂಗಪ್ಪ ಮಲ್ಲೇದ ಇವರ ಹೆಂಡತಿ ಮತ್ತು ಮಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಇವರು ಒಂದನೇ ಪ್ರತಿವಾದಿಗಳಾದ ಮಹಾದೇವ ತಂದೆ ಮಾರುತಿ ಸೋಲಂಕೆ ಇವರ ಟ್ರಕ್ ಸಂಖ್ಯೆ-ಎಂಹೆಚ್-09:ಎ-9066 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪೂರ ಜಿಲ್ಲೆ, ಬಿಜಾಪೂರ.

ಪಿ.ಆರ್. 131

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಹಾಸನ ಉಪವಿಭಾಗ, ಹಾಸನ

**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್‌ಆರ್-F/SR-45/2005, ದಿನಾಂಕ: 19ನೇ ಜನವರಿ 2006**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಪ್ರತಿಮಾ ಕೋಂ ಲೇಟ್ ದೇವರಾಜೇಗೌಡ
2. ಸೌಮ್ಯ ಬಿನ್ ಲೇಟ್ ದೇವರಾಜೇಗೌಡ
3. ರಕ್ಷಿತ ಬಿನ್ ಲೇಟ್ ದೇವರಾಜೇಗೌಡ
   ವಾಸ: ಗೊರೂರು ಗ್ರಾಮ, ಕಟ್ಟಾಯ ಹೋಬಳಿ, ಹಾಸನ ತಾಲ್ಲೂಕು.

1. ಟಿ. ಮಂಜುನಾಥ ಬಿನ್ ತಿಮ್ಮೇಗೌಡ, ಅಂಕಪುರಗ್ರಾಮ, ಕಟ್ಟಯ ಹೊ।। ಹಾಸನ.
2. ಬ್ರಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಶೂರೆನ್ಸ್ ಕಂ, ಮೊದಲನೇ ಮಹಡಿ, ಬಸ್‌ಸ್ಟ್ಯಾಂಡ್ ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ದೇವರಾಜು ಅದೇವರಾಜೇಗೌಡ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 30.9.2005 ರಂದು ಸಾವನ್ನಪ್ಪಿರುತ್ತಾರೆ. ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್. 132

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ:ಕೃಮಾಇ/26/ಚುನಾವ/2005 ದಿನಾಂಕ: 07ನೇ ಜನವರಿ 2006**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯ್ದೆ, 1966ರ ಪ್ರಕರಣ 11ರ ಉಪ ಪ್ರಕರಣ (1)(viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಪ್ರಕರಣ 11ರ ಪ್ರಕಾರ ರಚಿತವಾಗಿರುವ ರಾಜ್ಯದಲ್ಲಿನ 26 ಜಿಲ್ಲೆಗಳ 118 ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಈ ಕೆಳಕಂಡ ಅಧಿಕಾರಿಗಳನ್ನು ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| 1. | ಬೆಂಗಳೂರು ಗ್ರಾಮಾಂತರ | 1. ದೊಡ್ಡಬಳ್ಳಾಪುರ | ಸಹಾಯಕ ನಿರ್ದೇಶಕರು,<br>ಕೃಷಿ ಮಾರಾಟ ಇಲಾಖೆ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| 2. | ಚಿತ್ರದುರ್ಗ | 2. ಚಿತ್ರದುರ್ಗ | ಕಾರ್ಯದರ್ಶಿ,<br>ಕೃಉಮಾಸ, ದಾವಣಗೆರೆ |
| | | 3. ಹಿರಿಯೂರು | ಉಪ ನಿರ್ದೇಶಕರು,<br>ಕೃಷಿ ಮಾರಾಟ ಇಲಾಖೆ, ಚಿತ್ರದುರ್ಗ ಜಿಲ್ಲೆ |
| | | 4. ಹೊಸದುರ್ಗ | ಕಾರ್ಯದರ್ಶಿ,<br>ಕೃಉಮಾಸ, ಹಿರಿಯೂರು |
| | | 5. ಚಳ್ಳಕೆರೆ | ಉಪ ನಿರ್ದೇಶಕರು,<br>ಕೃಷಿ ಮಾರಾಟ ಇಲಾಖೆ, ಚಿತ್ರದುರ್ಗ ಜಿಲ್ಲೆ |
| 3. | ದಾವಣಗೆರೆ | 6. ದಾವಣಗೆರೆ | ಕಾರ್ಯದರ್ಶಿ,<br>ಕೃಉಮಾಸ, ರಾಣೆಬೆನ್ನೂರು |
| | | 7. ಜಗಳೂರು | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ದಾವಣಗೆರೆ ಜಿಲ್ಲೆ. |
| | | 8. ಹರಿಹರ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ದಾವಣಗೆರೆ ಜಿಲ್ಲೆ. |
| | | 9. ಹೊನ್ನಾಳಿ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ದಾವಣಗೆರೆ ಜಿಲ್ಲೆ. |
| | | 10. ಚನ್ನಗಿರಿ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ದಾವಣಗೆರೆ ಜಿಲ್ಲೆ. |
| 4. | ಕೋಲಾರ | 11. ಕೋಲಾರ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಕೋಲಾರ ಜಿಲ್ಲೆ. |
| | | 12. ಮಾಲೂರು | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಕೋಲಾರ ಜಿಲ್ಲೆ. |
| | | 13. ಚಿಕ್ಕಬಳ್ಳಾಪುರ | ಕಾರ್ಯದರ್ಶಿ,<br>ಕೃಉಮಾಸ, ಚಿಂತಾಮಣಿ. |
| | | 14. ಚಿಂತಾಮಣಿ | ಕಾರ್ಯದರ್ಶಿ,<br>ಕೃಉಮಾಸ, ಗೌರಿಬಿದನೂರು. |
| | | 15. ಬಂಗಾರಪೇಟೆ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಕೋಲಾರ ಜಿಲ್ಲೆ. |
| | | 16. ಗೌರಿಬಿದನೂರು | ಕಾರ್ಯದರ್ಶಿ,<br>ಕೃಉಮಾಸ, ಚಿಕ್ಕಬಳ್ಳಾಪುರ. |
| | | 17. ಶ್ರೀನಿವಾಸಪುರ | ಕಾರ್ಯದರ್ಶಿ,<br>ಕೃಉಮಾಸ, ಕೋಲಾರ. |
| | | 18. ಮುಳಬಾಗಿಲು | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಕೋಲಾರ ಜಿಲ್ಲೆ. |
| 5 | ತುಮಕೂರು | 19. ತುಮಕೂರು | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ತುಮಕೂರು ಜಿಲ್ಲೆ. |
| | | 20. ಪಾವಗಡ | ಕಾರ್ಯದರ್ಶಿ,<br>ಕೃಉಮಾಸ, ಮಧುಗಿರಿ. |
| | | 21. ಶಿರಾ | ಕಾರ್ಯದರ್ಶಿ,<br>ಕೃಉಮಾಸ, ಹಿರಿಯೂರು. |
| | | 22. ತುರುವೇಕರೆ | ಕಾರ್ಯದರ್ಶಿ,<br>ಕೃಉಮಾಸ,<br>ಹುಳಿಯಾರು. |
| | | 23. ತಿಪಟೂರು | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ತುಮಕೂರು ಜಿಲ್ಲೆ. |
| | | 24. ಗುಬ್ಬಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ತುಮಕೂರು ಜಿಲ್ಲೆ. |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| | | 25. ಕುಣಿಗಲ್ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ತುಮಕೂರು ಜಿಲ್ಲೆ. |
| | | 26. ಮಧುಗಿರಿ | ಕಾರ್ಯದರ್ಶಿ,<br>ಕೃಉಮಾಸ, ಶಿರಾ. |
| | | 27. ಹುಳಿಯಾರು | ಕಾರ್ಯದರ್ಶಿ,<br>ಕೃಉಮಾಸ, ಕುಣಿಗಲ್. |
| 6 | ಮೈಸೂರು | 28. ಮೈಸೂರು | ಕಾರ್ಯದರ್ಶಿ,<br>ಕೃಉಮಾಸ, ಯಶವಂತಪುರ, ಬೆಂಗಳೂರು. |
| | | 29. ಕೃಷ್ಣರಾಜನಗರ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಮೈಸೂರು ಜಿಲ್ಲೆ. |
| | | 30. ಹುಣಸೂರು | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಮೈಸೂರು ಜಿಲ್ಲೆ. |
| | | 31. ಪಿರಿಯಾಪಟ್ಟಣ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಮೈಸೂರು ಜಿಲ್ಲೆ. |
| 7 | ಕೊಡಗು | 32. ಮಡಿಕೇರಿ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಕೊಡಗು ಜಿಲ್ಲೆ. |
| | | 33. ಸೋಮವಾರಪೇಟೆ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಕೊಡಗು ಜಿಲ್ಲೆ. |
| | | 34. ಗೋಣಿಕೊಪ್ಪಲ್ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಕೊಡಗು ಜಿಲ್ಲೆ. |
| 8 | ಚಿಕ್ಕಮಗಳೂರು | 35. ಕಡೂರು | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಚಿಕ್ಕಮಗಳೂರು ಜಿಲ್ಲೆ. |
| | | 36. ತರೀಕೆರೆ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಚಿಕ್ಕಮಗಳೂರು ಜಿಲ್ಲೆ. |
| 9 | ಹಾಸನ | 37. ಅರಸೀಕೆರೆ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಹಾಸನ ಜಿಲ್ಲೆ. |
| | | 38. ಸಕಲೇಶಪುರ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಹಾಸನ ಜಿಲ್ಲೆ. |
| | | 39. ಚನ್ನರಾಯಪಟ್ಟಣ | ಕಾರ್ಯದರ್ಶಿ,<br>ಕೃಉಮಾಸ, ಹಾಸನ. |
| | | 40. ಹೊಳೆನರಸೀಪುರ | ಕಾರ್ಯದರ್ಶಿ,<br>ಕೃಉಮಾಸ, ಅರಸೀಕೆರೆ. |
| | | 41. ಹಾಸನ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಹಾಸನ ಜಿಲ್ಲೆ. |
| | | 42. ಬೇಲೂರು | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಹಾಸನ ಜಿಲ್ಲೆ. |
| 10 | ದಕ್ಷಿಣ ಕನ್ನಡ | 43. ಮಂಗಳೂರು | ಕಾರ್ಯದರ್ಶಿ,<br>ಕೃಉಮಾಸ, ಯಶವಂತಪುರ, ಬೆಂಗಳೂರು. |
| | | 44. ಬಂಟ್ವಾಳ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ದಕ್ಷಿಣ ಕನ್ನಡ ಜಿಲ್ಲೆ.ಮಂಗಳೂರು |
| | | 45. ಬೆಳ್ತಂಗಡಿ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು. |
| 11 | ಉಡುಪಿ | 46. ಉಡುಪಿ | ಕಾರ್ಯದರ್ಶಿ,<br>ಕೃಉಮಾಸ, ಮಂಗಳೂರು. |
| | | 47. ಕಾರ್ಕಳ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಉಡುಪಿ ಜಿಲ್ಲೆ. |
| | | 48. ಕುಂದಾಪುರ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಉಡುಪಿ ಜಿಲ್ಲೆ. |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| 12 | ಚಾಮರಾಜನಗರ | 49. ಚಾಮರಾಜನಗರ | ಕಾರ್ಯದರ್ಶಿ,<br>ಕೃಉಮಾಸ, ಗುಂಡ್ಲುಪೇಟೆ. |
| | | 50. ಗುಂಡ್ಲುಪೇಟೆ | ಕಾರ್ಯದರ್ಶಿ,<br>ಕೃಉಮಾಸ, ಕೊಳ್ಳೇಗಾಲ. |
| 13. | ಮಂಡ್ಯ | 51. ಮದ್ದೂರು | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಮಂಡ್ಯ ಜಿಲ್ಲೆ. |
| 14 | ಬೆಳಗಾವಿ | 52. ಬೆಳಗಾವಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಧಾರವಾಡ ಜಿಲ್ಲೆ. |
| | | 53. ಅಥಣಿ | ಕಾರ್ಯದರ್ಶಿ,<br>ಕೃಉಮಾಸ, ನಿಪ್ಪಾಣಿ. |
| | | 54. ಬೈಲಹೊಂಗಲ | ಕಾರ್ಯದರ್ಶಿ,<br>ಕೃಉಮಾಸ, ಬೆಳಗಾವಿ. |
| | | 55. ಗೋಕಾಕ್ | ಕಾರ್ಯದರ್ಶಿ,<br>ಕೃಉಮಾಸ, ಸೌಂದತ್ತಿ. |
| | | 56. ರಾಮದುರ್ಗ | ಕಾರ್ಯದರ್ಶಿ,<br>ಕೃಉಮಾಸ, ಕುಡಚಿ. |
| | | 57. ಸೌಂದತ್ತಿ | ಕಾರ್ಯದರ್ಶಿ,<br>ಕೃಉಮಾಸ, ಧಾರವಾಡ. |
| | | 58. ಕುಡಚಿ | ಕಾರ್ಯದರ್ಶಿ,<br>ಕೃಉಮಾಸ, ಅಥಣಿ. |
| | | 59. ನಂದಗಡ | ಕಾರ್ಯದರ್ಶಿ,<br>ಕೃಉಮಾಸ, ಬೈಲಹೊಂಗಲ. |
| | | 60. ನಿಪ್ಪಾಣಿ | ಕಾರ್ಯದರ್ಶಿ,<br>ಕೃಉಮಾಸ, ಸಂಕೇಶ್ವರ. |
| | | 61. ಸಂಕೇಶ್ವರ | ಕಾರ್ಯದರ್ಶಿ,<br>ಕೃಉಮಾಸ, ರಾಮದುರ್ಗ. |
| 15 | ಬಾಗಲಕೋಟೆ | 62. ಬಾಗಲಕೋಟೆ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಾಗಲಕೋಟೆ ಜಿಲ್ಲೆ. |
| | | 63. ಜಮಖಂಡಿ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಾಗಲಕೋಟೆ ಜಿಲ್ಲೆ. |
| | | 64. ಮಹಾಲಿಂಗಪುರ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಾಗಲಕೋಟೆ ಜಿಲ್ಲೆ. |
| | | 65. ಬದಾಮಿ | ಕಾರ್ಯದರ್ಶಿ,<br>ಕೃಉಮಾಸ, ಬಾಗಲಕೋಟೆ. |
| | | 66. ಹುನಗುಂದ | ಕಾರ್ಯದರ್ಶಿ,<br>ಕೃಉಮಾಸ, ಮಹಾಲಿಂಗಪುರ. |
| 16 | ಬಿಜಾಪುರ | 67. ಬಿಜಾಪುರ | ಕಾರ್ಯದರ್ಶಿ,<br>ಕೃಉಮಾಸ, ಹುಬ್ಬಳ್ಳಿ. |
| | | 68. ಸಿಂಧಗಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಿಜಾಪುರ ಜಿಲ್ಲೆ. |
| | | 69. ತಾಳಿಕೋಟೆ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಿಜಾಪುರ ಜಿಲ್ಲೆ. |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| 17 | ಧಾರವಾಡ | 70. ಧಾರವಾಡ | ಉಪ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಧಾರವಾಡ ಜಿಲ್ಲೆ. |
| | | 71. ಅಣ್ಣಿಗೇರಿ | ಉಪ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಧಾರವಾಡ ಜಿಲ್ಲೆ. |
| | | 72. ಹುಬ್ಬಳ್ಳಿ | ಕಾರ್ಯದರ್ಶಿ, ಕೃಉಮಾಸ, ಗದಗ. |
| | | 73. ಕುಂದಗೋಳ | ಉಪ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಧಾರವಾಡ ಜಿಲ್ಲೆ. |
| 18 | ಹಾವೇರಿ | 74. ಹಾವೇರಿ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಹಾವೇರಿ ಜಿಲ್ಲೆ. |
| | | 75. ಹಾನಗಲ್ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಹಾವೇರಿ ಜಿಲ್ಲೆ. |
| | | 76. ರಾಣೆಬೆನ್ನೂರು | ಕಾರ್ಯದರ್ಶಿ, ಕೃಉಮಾಸ, ಚಿತ್ರದುರ್ಗ. |
| | | 77. ಸವಣೂರು | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಹಾವೇರಿ ಜಿಲ್ಲೆ. |
| | | 78. ಹಿರೇಕೆರೂರು | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಹಾವೇರಿ ಜಿಲ್ಲೆ. |
| 19 | ಗದಗ | 79. ಗದಗ | ಕಾರ್ಯದರ್ಶಿ, ಕೃಉಮಾಸ, ಶಿರಸಿ. |
| | | 80. ನರಗುಂದ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಗದಗ ಜಿಲ್ಲೆ. |
| | | 81. ರೋಣ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಗದಗ ಜಿಲ್ಲೆ. |
| | | 82. ಲಕ್ಷ್ಮೇಶ್ವರ | ಕಾರ್ಯದರ್ಶಿ, ಕೃಉಮಾಸ, ಮುಂಡರಗಿ. |
| | | 83. ಮುಂಡರಗಿ | ಕಾರ್ಯದರ್ಶಿ, ಕೃಉಮಾಸ, ರೋಣ. |
| 20 | ಉತ್ತರ ಕನ್ನಡ | 84. ಹಳಿಯಾಳ | ಕಾರ್ಯದರ್ಶಿ, ಕೃಉಮಾಸ, ಯಲ್ಲಾಪುರ. |
| | | 85. ಕುಮಟಾ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಉತ್ತರ ಕನ್ನಡ ಜಿಲ್ಲೆ. ಶಿರಸಿ |
| | | 86. ಹೊನ್ನಾವರ | ಕಾರ್ಯದರ್ಶಿ, ಕೃಉಮಾಸ, ಕಾರವಾರ. |
| | | 87. ಸಿದ್ದಾಪುರ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಉತ್ತರ ಕನ್ನಡ ಜಿಲ್ಲೆ. ಶಿರಸಿ. |
| | | 88. ಯಲ್ಲಾಪುರ | ಕಾರ್ಯದರ್ಶಿ, ಕೃಉಮಾಸ, ಕುಮಟಾ. |
| | | 89. ಕಾರವಾರ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಉತ್ತರ ಕನ್ನಡ ಜಿಲ್ಲೆ. ಶಿರಸಿ. |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| 21 | ಬಳ್ಳಾರಿ | 90. ಬಳ್ಳಾರಿ | ಕಾರ್ಯದರ್ಶಿ,<br>ಕೃಉಮಾಸ, ಗಂಗಾವತಿ. |
| | | 91. ಹೊಸಪೇಟೆ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಳ್ಳಾರಿ ಜಿಲ್ಲೆ. |
| | | 92. ಹೆಚ್.ಬಿ.ಹಳ್ಳಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಳ್ಳಾರಿ ಜಿಲ್ಲೆ. |
| | | 93. ಸಿರುಗುಪ್ಪ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಳ್ಳಾರಿ ಜಿಲ್ಲೆ. |
| | | 94. ಹಡಗಲಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಬಳ್ಳಾರಿ ಜಿಲ್ಲೆ. |
| 22 | ಕೊಪ್ಪಳ | 95. ಕೊಪ್ಪಳ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಕೊಪ್ಪಳ ಜಿಲ್ಲೆ. |
| | | 96. ಗಂಗಾವತಿ | ಹೆಚ್ಚುವರಿ ನಿರ್ದೇಶಕರು, ಕೇಂದ್ರಕಛೇರಿ,<br>ಕೃಷಿ ಮಾರಾಟ ಇಲಾಖೆ, ಬೆಂಗಳೂರು. |
| | | 97. ಕುಷ್ಟಗಿ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಕೊಪ್ಪಳ ಜಿಲ್ಲೆ. |
| | | 98. ಯಲ್ಬುರ್ಗಾ | ಸಹಾಯಕ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಕೊಪ್ಪಳ ಜಿಲ್ಲೆ. |
| 23 | ರಾಯಚೂರು | 99. ರಾಯಚೂರು | ಕಾರ್ಯದರ್ಶಿ,<br>ಕೃಉಮಾಸ, ಬಳ್ಳಾರಿ. |
| | | 100. ಲಿಂಗಸುಗೂರು | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ರಾಯಚೂರು ಜಿಲ್ಲೆ. |
| | | 101. ಸಿಂಧನೂರು | ಕಾರ್ಯದರ್ಶಿ,<br>ಕೃಉಮಾಸ, ಗುಲ್ಬರ್ಗಾ. |
| | | 102. ಮಾನ್ವಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ರಾಯಚೂರು ಜಿಲ್ಲೆ. |
| 24 | ಶಿವಮೊಗ್ಗ | 103. ಶಿವಮೊಗ್ಗ | ಹೆಚ್ಚುವರಿ ನಿರ್ದೇಶಕರು, ಕೇಂದ್ರಕಛೇರಿ,<br>ಕೃಷಿ ಮಾರಾಟ ಇಲಾಖೆ, ಬೆಂಗಳೂರು. |
| | | 104. ಸಾಗರ | ಕಾರ್ಯದರ್ಶಿ,<br>ಕೃಉಮಾಸ, ಶಿವಮೊಗ್ಗ. |
| | | 105. ಭದ್ರಾವತಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಶಿವಮೊಗ್ಗ ಜಿಲ್ಲೆ. |
| | | 106. ಶಿಕಾರಿಪುರ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ, ಶಿವಮೊಗ್ಗ ಜಿಲ್ಲೆ. |
| 25 | ಗುಲ್ಬರ್ಗಾ | 107. ಗುಲ್ಬರ್ಗಾ | ಕಾರ್ಯದರ್ಶಿ,<br>ಕೃಉಮಾಸ, ಬಿಜಾಪುರ. |
| | | 108. ಯಾದಗಿರಿ | ಉಪ ನಿರ್ದೇಶಕರು.<br>ಕೃಷಿ ಮಾರಾಟ ಇಲಾಖೆ,<br>ಗುಲ್ಬರ್ಗಾ ಜಿಲ್ಲೆ. |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| | | 109. ಶಹಾಪುರ | ಉಪ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಗುಲ್ಬರ್ಗಾ ಜಿಲ್ಲೆ. |
| | | 110. ಸುರಪುರ | ಉಪ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಗುಲ್ಬರ್ಗಾ ಜಿಲ್ಲೆ. |
| | | 111. ಚಿತ್ತಾಪುರ | ಕಾರ್ಯದರ್ಶಿ, ಕೃಉಮಾಸ, ಯಾದಗಿರಿ. |
| | | 112. ಸೇಡಂ | ಕಾರ್ಯದರ್ಶಿ, ಕೃಉಮಾಸ, ಸುರಪುರ. |
| | | 113. ಚಿಂಚೋಳಿ | ಕಾರ್ಯದರ್ಶಿ, ಕೃಉಮಾಸ, ಸೇಡಂ. |
| 26 | ಬೀದರ್ | 114. ಬೀದರ್ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಬೀದರ್ ಜಿಲ್ಲೆ. |
| | | 115. ಬಸವಕಲ್ಯಾಣ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಬೀದರ್ ಜಿಲ್ಲೆ. |
| | | 116. ಭಾಲ್ಕಿ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಬೀದರ್ ಜಿಲ್ಲೆ. |
| | | 117. ಹುಮನಾಬಾದ್ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಬೀದರ್ ಜಿಲ್ಲೆ. |
| | | 118. ಔರಾದ್ | ಸಹಾಯಕ ನಿರ್ದೇಶಕರು. ಕೃಷಿ ಮಾರಾಟ ಇಲಾಖೆ, ಬೀದರ್ ಜಿಲ್ಲೆ. |

**ಸೈಯದ್ ಜಮೀರ್ ಪಾಷಾ**

ಪಿ.ಆರ್. 133 ಆಯುಕ್ತರು ಹಾಗೂ ನಿರ್ದೇಶಕರು.

**ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ ರವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಡಿಆರ್‌ಬಿ-2/ಎಂಡಿ/13/2005-2006**

**ವಾದಿ:** ಶ್ರೀಮತಿ ಇಂದಿರಮ್ಮ ಕೋಂ ಡಿ.ಪಿ.ಕೆ. ಆಚಾರ್, ನಂ. 1131, 18ನೇ ಕ್ರಾಸ್, 24ನೇ ಮೇನ್, ಬಿ.ಎಸ್.ಕೆ. 2ನೇ ಸ್ಟೇಜ್, ಬೆಂಗಳೂರು - 560 070.

**ವಿರುದ್ಧ**

**ಪ್ರತಿವಾದಿ:**

1. ಕಾರ್ಯದರ್ಶಿ, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು - 11.
2. ಶ್ರೀ ತಿರುಮಲ್ಲೇಶ್, ಮಾಜಿ ನಿರ್ದೇಶಕರು, ನಂ. 40, 12ನೇ ಕ್ರಾಸ್, 12ನೇ ಮೇನ್, ರಾಘವೇಂದ್ರ ಲೇಔಟ್, ಕಾಳಿದಾಸ ಲೇಔಟ್ ಹತ್ತಿರ, ಶ್ರೀನಗರ, ಬೆಂಗಳೂರು - 50.
3. ಶ್ರೀಮತಿ ಜಾಹ್ನವಿ ಆನಂದ್, ಕಾರ್ಯದರ್ಶಿ, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 252, 1ನೇ ಫ್ಲೋರ್, 9ನೇ ಮೇನ್, ಸಂಪಂಗಿರಾಮನಗರ, ಬೆಂಗಳೂರು-27.
4. ಶ್ರೀಮತಿ ಸಂಧ್ಯಾ ಕೆ. ರಾವ್, ಕೋಂ ಗುರುರಾಜ್, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 40, 12ನೇ ಕ್ರಾಸ್, 12ನೇ ಮೇನ್, ರಾಘವೇಂದ್ರ ಲೇಔಟ್, ಕಾಳಿದಾಸ ಲೇಔಟ್, ಹತ್ತಿರ, ಶ್ರೀನಗರ, ಬೆಂಗಳೂರು - 50.
5. ಶ್ರೀಮತಿ ನಾಗಮ್ಮ ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು - 11
6. ಶ್ರೀಮತಿ ಶಶಿಕಲಾ, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು - 11.

7. ಶ್ರೀಮತಿ ಸುನಿತಾ, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು - 11.
8. ಶ್ರೀ ಅಚ್ಯುತಾ, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು - 11.
9. ಶ್ರೀ ರಾಘವೇಂದ್ರ, ಮಾಜಿ ನಿರ್ದೇಶಕರು, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 652, ಕನಕ ಪ್ಲಾಜಾ, 11ನೇ ಮೇನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು - 11.
10. ಶ್ರೀಮತಿ ಗೀತಾ ಭಟ್, ಕೋಂ ವಾಸುದೇವ್ ಭಟ್, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು - 11.
11. ವಿಶೇಷಾಧಿಕಾರಿ, ಶ್ರೀ ಲಕ್ಷ್ಮೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 252, ಸಂಪಂಗಿರಾಮನಗರ, ಬೆಂಗಳೂರು - 27.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡುವ ಬಗ್ಗೆ ನೋಟೀಸು**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರ ಅನ್ವಯ ಈ ನ್ಯಾಯಾಲಯದ ಮುಂದೆ ವಾದಿಯು ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.1,00,000/- ಗಳನ್ನು ಸಾಲಿಯಾನ ಶೇ. 18% ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯು ಈ ದಾವಾ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋಂದಾಯಿಸಿಕೊಂಡು ಈ ನ್ಯಾಯಾಲಯದಲ್ಲಿ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಮೇಲ್ಕಂಡ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರ ಅನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 10ನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ಮಾಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 10ನೇ ಪ್ರತಿವಾದಿ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103 ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರ ಅರ್ಜಿಯ ಜೊತೆಯಲ್ಲಿ ಸಲ್ಲಿಸಿರುವ ಪ್ರಮಾಣ ಈ ಪತ್ರದಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ, ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಈ ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಭೀಮಸೇನ ಬಂಕದ, ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು 10ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,00,000-00 ಗಳನ್ನು ಬಡ್ಡಿ ಸಹಿತ ಈ ನ್ಯಾಯಾಲಯದ ಬೆಂಗಳೂರು ಜಿಲ್ಲಾ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವೈಯಕ್ತಿಕ ಖಾತೆಯಲ್ಲಿ ದಿನಾಂಕ:15.2.2006 ರೊಳಗಾಗಿ ಜಮಾ ಮಾಡಿ ಅಧಿಕೃತ ಮೂಲ ಚಲನ್ / ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಶ್ರೀಮತಿ ಗೀತಾಭಟ್ ಕೋಂ ವಾಸುದೇವ್ ಭಟ್, 10ನೇ ಪ್ರತಿವಾದಿ ಇವರ ಸ್ಥಿರಾಸ್ತಿಯ ಸ್ವತ್ತು ನಂ. 44, ಎಲ್ಐಜಿ 8ನೇ ಎ ಕ್ರಾಸ್, 2ನೇ ಸ್ಟೇಜ್, ಕೆಂಗೇರಿ ಉಪನಗರ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇದ್ದು, ಪೂರ್ವ-ಪಶ್ಚಿಮ 30 ಅಡಿ, ಉತ್ತರ-ದಕ್ಷಿಣ 33 ಅಡಿ, ಇದಕ್ಕೆ ಚೆಕ್ಕು ಬಂದಿ:-

ಪೂರ್ವಕ್ಕೆ : ಇತರೆ ಆಸ್ತಿ
ಪಶ್ಚಿಮಕ್ಕೆ : ಆಸ್ತಿ ನಂ. 45
ಉತ್ತರಕ್ಕೆ : ರಸ್ತೆ
ದಕ್ಷಿಣಕ್ಕೆ : ಕನಸರ್‌ವೆನ್ಸಿ
ಒಟ್ಟು 990 ಚದುರ ಅಡಿ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 21.1.2006 ರಂದು ನೀಡಿರುತ್ತೇನೆ.

**ಭೀಮಸೇನ ಬಂಕದ**

ಪಿ.ಆರ್. 134

ಸಹಕಾರ ಸಂಘಗಳ ಉಪ ನಿಬಂಧಕರು-2,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ದಾವಣಗೆರೆ ಉಪ ವಿಭಾಗ, ದಾವಣಗೆರೆ

**ಕ್ರ.ಸಂ.ಎ.ಆರ್.31/ದಾವಾ/ಅಮಲ್ಜಾರಿ ಸಂಖ್ಯೆ 247/2003-04, ದಿನಾಂಕ: 12ನೇ ಜನವರಿ 2006**

**ವಿಷಯ:** ದಿ ದಾವಣಗೆರೆ - ಹರಿಹರ ಅರ್ಬನ್ ಸಹಕಾರ ಬ್ಯಾಂಕ್ ನಿಯಮಿತ ದಾವಣಗೆರೆ ಇದರಲ್ಲಿ ಸಾಲ ಪಡೆದು ಸುಸ್ತಿಯಾಗಿರುವ ಶ್ರೀ ಬಿ.ವಿ. ಸುಬ್ಬಾರೆಡ್ಡಿ ಇವರ ಸ್ಥಿರಾಸ್ತಿಯ ಮಾರಾಟವನ್ನು ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ:**
1. ಮಾರಾಟಾಧಿಕಾರಿಗಳು ದಿ ದಾವಣಗೆರೆ - ಹರಿಹರ ಅರ್ಬನ್ ಸಹಕಾರ ಬ್ಯಾಂಕ್ ನಿಯಮಿತ, ದಾವಣಗೆರೆ ಇವರ ಪ್ರಸ್ತಾವನೆಯ ತಾರೀಖು 24.1.04.
2. ಈ ಕಛೇರಿಯ ಸಮ ಸಂಖ್ಯೆ ಆದೇಶಗಳ ದಿನಾಂಕ 3.3.04 ಹಾಗೂ ದಿನಾಂಕ 22.2.05.
3. ಶ್ರೀ ಬಿ. ವೇಣುಗೋಪಾಲರೆಡ್ಡಿ ಎಂ.ಸಿ.ಸಿ. "ಬಿ" ಬ್ಲಾಕ್, ದಾವಣಗೆರೆ ಇವರ ಪತ್ರಗಳ ದಿನಾಂಕ 24.6.04 ಹಾಗೂ 22.11.05.
4. ಈ ಕಛೇರಿಯ ಸಮ ಸಂಖ್ಯೆಯ ನೋಟೀಸುಗಳ ದಿನಾಂಕ 2.1.06.

**ಪ್ರಸ್ತಾವನೆ:**

ದಿ ದಾವಣಗೆರೆ - ಹರಿಹರ ಅರ್ಬನ್ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇದರಲ್ಲಿ ಸಾಲ ಪಡೆದು ಮರುಪಾವತಿ ಮಾಡದೇ ಸುಸ್ತಿಯಾದ ಕಾರಣ ಕಾಯ್ದೆಯಡಿ ಕಾನೂನು ಕ್ರಮಕ್ಕೆ ಒಳಪಡಿಸಿದ್ದು ಶ್ರೀ ಬಿ.ವಿ. ಸುಬ್ಬಾರೆಡ್ಡಿ ಇವರು ಅಡವು ಮಾಡಿದ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ, ಎಂ.ಸಿ.ಸಿ. "ಬಿ" ಬ್ಲಾಕ್, ಸೈಟ್ ನಂಬರ್ 73 ಡೋರ್ ನಂಬರ್ 2929 ಅಳತೆ 44 X 60 ಅಡಿಯಲ್ಲಿರುವ ಆರ್.ಸಿ.ಸಿ. ಮನೆ ಮತ್ತು ಸೈಟ್ ನಂಬರ್ 74 ಡೋರ್ ನಂಬರ್ 2930ರ ಅಳತೆ 10 X 60 ಅಡಿ ಖಾಲಿ ಜಾಗವನ್ನು ದಾವಾ ಸಂಖ್ಯೆ ಜಿಆರ್‌ಬಿ/ಡಿಐಎಸ್/3091/2000-01 ದಿ:31.3.01ರ ತೀರ್ಪಿನ ಅನುಸಾರ ಈ ಕಛೇರಿಯ ಅಮಲ್ಜಾರಿ ಸಂಖ್ಯೆ 249/2000-01 ಇರುತ್ತದೆ. ಶ್ರೀ ಬಿ.ವಿ. ಸುಬ್ಬಾರೆಡ್ಡಿಯವರು ನಿಧನರಾದ ಪ್ರಯುಕ್ತ ಅವರ ವಾರಸುದಾರರನ್ನು ಜವಾಬ್ದಾರರನ್ನಾಗಿ ಮಾಡಿ ದಿನಾಂಕ 31.10.01 ರಲ್ಲಿ ಈ ಕಛೇರಿಯಲ್ಲಿ ಸೇರ್ಪಡೆ ಮಾಡಲಾಗಿರುತ್ತದೆ. ಅದರಂತೆ ದಿನಾಂಕ:28.11.03 ರಂದು ಬ್ಯಾಂಕಿನ ಮಾರಾಟಾಧಿಕಾರಿಗಳು ಬಹಿರಂಗ ಹರಾಜು ನಡೆಸಿರುತ್ತಾರೆ. ಸದರಿ ಹರಾಜಿನಲ್ಲಿ ವಾರಸುದಾರರಾದ ಶ್ರೀ ಬಿ. ವೇಣುಗೋಪಾಲ ರೆಡ್ಡಿ ಯವರು ಭಾಗವಹಿಸಿರುತ್ತಾರೆ. ಹಾಗೂ ಅತ್ಯಧಿಕ ಬಿಡ್ಡುದಾರರಾಗಿ ರೂ.17,50,000/- ಗಳಿಗೆ ಕೂಗಿರುತ್ತಾರೆ. ಈ ಪೈಕಿ ರೂ.8,00,000-00 ಗಳನ್ನು ಪಾವತಿ ಮಾಡಿ ಉಳಿದ ಹಣವನ್ನು ಪಾವತಿ ಮಾಡಲು ಸಾಧ್ಯವಾಗಿಲ್ಲದ ಕಾರಣ ಸದರಿ ರೂ.8,00,000-00 ಗಳನ್ನು ಸಾಲಗಾರರ ಖಾತೆಗೆ ಜಮಾ ಮಾಡಿಕೊಳ್ಳಲಾಗಿರುತ್ತದೆ.

ಸದರಿ ಶ್ರೀ ಬಿ. ವೇಣುಗೋಪಾಲ್ ರೆಡ್ಡಿಯವರು ದಿನಾಂಕ 22.11.2005 ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ ಬಾಕಿ ಉಳಿದಿರುವ ಮೊತ್ತವನ್ನು ಪಾವತಿಸುವುದಾಗಿ ಕೋರಿರುತ್ತಾರೆ. ಸದರಿಯವರು ಅರ್ಜಿಯ ವಿಚಾರಣೆಯನ್ನು ದಿನಾಂಕ: 9.1.06 ರಂದು ನಿಗದಿಪಡಿಸಿ ಉಭಯತರಲ್ಲಿ ನೋಟೀಸು ಜಾರಿ ಮಾಡಲಾಗಿರುತ್ತದೆ. ಸದರಿ ವಿಚಾರಣೆಗೆ ಹಾಜರಾದ ಶ್ರೀ ಬಿ. ವೇಣುಗೋಪಾಲ್ ರೆಡ್ಡಿ ಮತ್ತು ಅವರ ಪರ ವಕೀಲರು ತಮ್ಮ ವಾದವನ್ನು ಮಂಡಿಸಿರುತ್ತಾರೆ. ಸದರಿಯವರು ಸಲ್ಲಿಸಿರುವ ಮಧ್ಯಂತರ ಅರ್ಜಿಗಳನ್ನು ಪರಿಶೀಲಿಸಿ ಗಮನಿಸಲಾಗಿದೆ.

ಅರ್ಜಿದಾರ ಬ್ಯಾಂಕಿನ ಉಪ ಪ್ರಧಾನ ವ್ಯವಸ್ಥಾಪಕರು ಹಾಜರಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ದಿನಾಂಕ 28.11.03 ರಲ್ಲಿ ಹರಾಜಾದ ಮೌಲ್ಯ ರೂ.17.50 ಲಕ್ಷ ಇದ್ದು ಈ ಪೈಕಿ ರೂ.8.00 ಲಕ್ಷ ಮಾತ್ರ ಬಿಡ್ಡುದಾರ ಪಾವತಿಸಿದ್ದು ಉಳಿದ ಹಣ ರೂ.9.50 ಲಕ್ಷ ಹಾಗೂ ಬಡ್ಡಿ ರೂ.3,95,833/- ಗಳನ್ನು ಪಾವತಿಸಲು ಆದೇಶ ಮಾಡಬೇಕಾಗಿ ಕೋರಿರುತ್ತಾರೆ.

ಶ್ರೀ ಬಿ. ವೇಣುಗೋಪಾಲ್ ರೆಡ್ಡಿ ಸಲ್ಲಿಸಿರುವ ಮಧ್ಯಂತರ ಅರ್ಜಿ 2ರ ಪ್ರಕಾರ ಕಾಲ ವಿಳಂಬದ ಬಗ್ಗೆ ತಮ್ಮ ಕಕ್ಷಿದಾರರಿಗೆ ಆರೋಗ್ಯ ಸರಿ ಇಲ್ಲದ ಕಾರಣ ಕಾಲ ವಿಳಂಬವಾಗಿದೆ ಎಂದು ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಕಾಲ ವಿಳಂಬವಾಗಿರುವ 10 ತಿಂಗಳು 16 ದಿನಗಳನ್ನು ಮನ್ನಾ ಮಾಡಿ ಅರ್ಜಿಯನ್ನು ಪುರಸ್ಕರಿಸಿದೆ.

ಅದೇ ರೀತಿ ಮಧ್ಯಂತರ ಅರ್ಜಿ 3ರಲ್ಲಿ ಸಿ.ಪಿ.ಸಿ. ಆದೇಶ 21 ನಿಯಮ 106 ಹಾಗೂ ಕಲಂ 151, 105, 114 ರನ್ವಯ ಸಲ್ಲಿಸಿ, ಶ್ರೀ ಬಿ.ವಿ. ಸುಬ್ಬರೆಡ್ಡಿಯವರ ಮಗನಾದ ಕಾರಣ ಬಹಿರಂಗ ಹರಾಜಿನಲ್ಲಿ ಭಾಗವಹಿಸಿರುವುದು ಅಸಿಂಧು ಎಂದು ಮಾಡಿರುವ ಆದೇಶವನ್ನು ರದ್ದುಪಡಿಸಲು ಯಾವುದೇ ಅಡಚಣೆ ನ್ಯೂನತೆಗಳು ಇಲ್ಲವೆಂದು ಪ್ರಮಾಣ ಪತ್ರದಲ್ಲಿ ತಿಳಿಸಿದ್ದು ಸದರಿ ಸಿ.ಪಿ.ಸಿ. ಆದೇಶ ನಿಯಮಗಳನ್ನು ಪರಿಶೀಲಿಸಿ ಈ ಹಿಂದೆ ದಿ. 22.2.05ರ ಆದೇಶವನ್ನು ಪುನಃ ಪರಿಶೀಲಿಸಿ ಅದನ್ನು ರದ್ದುಗೊಳಿಸಿದೆ.

ಹಾಗೆಯೇ ಮಧ್ಯಂತರ ಅರ್ಜಿ 4ರಲ್ಲಿ ಸಿ.ಪಿ.ಸಿ. ಆದೇಶ 21 ನಿಯಮ 92 ಆದೇಶ 34 ನಿಯಮ 5 ಮತ್ತು 11 ಹಾಗೂ ಕಲಂ 151 ರನ್ವಯ ಹಾಕಿರುವ ಅರ್ಜಿಯನ್ನು ಪರಿಶೀಲಿಸಲಾಗಿ ಶ್ರೀ ಬಿ.ವಿ. ಸುಬ್ಬಾರೆಡ್ಡಿಯವರ ಮಗನಾದ ಬಿ. ವೇಣುಗೋಪಾಲ್ ರೆಡ್ಡಿಯು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಸದರಿ ದಾವಾ ಸೊತ್ತನ್ನು ರೂ.17.50 ಲಕ್ಷಗಳಿಗೆ ಕೂಗಿ ಆತನೇ ಹೆಚ್ಚು ಮೌಲ್ಯಕ್ಕೆ ಕೂಗಿದ ಬಿಡ್ಡುದಾರನಾಗಿರುವ ಕಾರಣ ಹಾಗೂ ಈಗಾಗಲೇ ಸದರಿ ಶ್ರೀ ಬಿ. ವೇಣುಗೋಪಾಲ್ ರೆಡ್ಡಿಯವರು ಬಿಡ್ಡು ಮೊತ್ತದಲ್ಲಿ ರೂ.8.00 ಲಕ್ಷಗಳನ್ನು ಪಾವತಿಸಿರುವುದರಿಂದಲೂ ಉಳಿದ ರೂ.9.50 ಲಕ್ಷಗಳನ್ನು ಈ ಹಿಂದೆ ಸಾಲದ ಮೇಲೆ ಮರು ಪಾವತಿಸುವ ಒಪ್ಪಂದದಂತೆ ಹಾಗೂ ಅವಾರ್ಡಿನಲ್ಲಿ ನಿಗಧಿಪಡಿಸಿರುವ ಬಡ್ಡಿ ದರ ಸೇರಿಸಿ ಪಾವತಿಸುವಂತೆ ಅರ್ಜಿದಾರರು ಕೋರಿರುತ್ತಾರೆ. ಬಿಡ್ಡುದಾರರ ಪರ ವಕೀಲರು ವಾದ ಮಂಡಿಸುತ್ತಾ, ಈ ಹಂತದಲ್ಲಿ ಬಾಕಿ ಉಳಿದ ಮೊತ್ತಕ್ಕೆ ಶೇ 6% ರ ದರಕ್ಕಿಂತ ಹೆಚ್ಚಿಗೆ ಬಡ್ಡಿ ವಿಧಿಸಬಾರದಾಗಿ ಕೋರಿರುತ್ತಾರೆ. ಈ ಎಲ್ಲಾ ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಮಾಡಿದೆ.

### ಆದೇಶ

ಈ ಮೇಲ್ಕಂಡ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ದಿ ದಾವಣಗೆರೆ ಹರಿಹರ ಅರ್ಬನ್ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇವರ ಮಾರಾಟಾಧಿಕಾರಿಗಳು ದಿ.28.11.03 ರಂದು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(6)(ಎ) ರಡಿಯಲ್ಲಿ ಶ್ರೀ ಬಿ.ವಿ. ಸುಬ್ಬಾರೆಡ್ಡಿ ಇವರ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ, ಎಂ.ಸಿ.ಸಿ. "ಬಿ" ಬ್ಲಾಕ್, ಸೈಟ್ ನಂಬರ್ 73 ಡೋರ್ ನಂಬರ್ 2929 ಅಳತೆ 44 X 60 ಅಡಿ ಆರ್.ಸಿ.ಸಿ. ಮನೆ ಮತ್ತು ಸೈಟ್ ನಂಬರ್ 74 ಡೋರ್ ನಂಬರ್ 2930 ಅಳತೆ 10 X 60 ಅಡಿ ಖಾಲಿ ಜಾಗವನ್ನು ಶ್ರೀ ಬಿ. ವೇಣುಗೋಪಾಲ ರೆಡ್ಡಿ

ಬಿನ್ ಬಿ.ವಿ. ಸುಬ್ಬಾರೆಡ್ಡಿ ದಾವಣಗೆರೆ ಇವರಿಗೆ ರೂ. 17,50,000-00 (ಹದಿನೇಳು ಲಕ್ಷದ ಐವತ್ತು ಸಾವಿರ ರೂಪಾಯಿ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿರುವುದನ್ನು ಸ್ಥಿರೀಕರಿಸಿ ಈ ಮೂಲಕ ದೃಢೀಕರಿಸಲಾಗಿದೆ.

ಈ ಸಂಬಂಧ ರೂ.8,00,000-00 ಗಳನ್ನು ಈಗಾಗಲೇ ಪಾವತಿಸಿದ್ದು ಉಳಿದ ರೂ.9,50,000-00 ಗಳನ್ನು ಮತ್ತು ಹರಾಜಾದ ದಿನಾಂಕದಿಂದ ಶೇ 18% ರ ಬಡ್ಡಿಯಂತೆ ಈ ಆದೇಶದ 15 ದಿನಗಳೊಳಗಾಗಿ ಬ್ಯಾಂಕಿಗೆ ಪಾವತಿಸಿ ನಂತರ ಈ ಸೇಲ್ ಸರ್ಟಿಫಿಕೇಟ್‌ನ್ನು ಜಾರಿ ಮಾಡುವ ಸಂಬಂಧವಾಗಿ ಖರೀದಿದಾರರು ಹರಾಜಿನ ಮೊತ್ತಕ್ಕೆ ಅಗತ್ಯವಿರುವ ಸ್ಟಾಂಪ್ ಪತ್ರಗಳನ್ನು ಖರೀದಿಸಿ ಈ ಕಛೇರಿಗೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿ 12.1.06 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪ ವಿಭಾಗ, ದಾವಣಗೆರೆ

ಪಿ.ಆರ್. 135

## ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ ದಿನಾಂಕ:19ನೇ ಜನವರಿ 2006.

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಜ್ಞಾನಭಾರತಿ ಪಿ.ಎಸ್ 146/03 ಕಲಂ 457, 380 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಜ್ಞಾನಭಾರತಿ ಪಿ.ಎಸ್ 146/03 ಕಲಂ 457, 380 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 02.07.03 ರಂದು ಆರೋಪಿ

ಸೈಯದ್ ಅಸ್ಲಂ @ ಅಸ್ಲಂ ಬಿನ್ ಸೈಯದ್ ಜಾನಿ ವಯಸ್ಸು 19 ವರ್ಷ, ವಾಸ ಟಿ.ವಿ ಸ್ಟೇಷನ್ ಗೌರಿಬಿದನೂರು ರಸ್ತೆ, ದೊಡ್ಡಬಳ್ಳಾಪುರ,

ಈತನನ್ನು ದಸ್ತಗಿರಿ ಮಾಡಿ, ಸದರಿ ಆರೋಪಿತನು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ಮಾಲನ್ನು ಸ್ವಾಧೀನಪಡಿಸಲಾಗಿತ್ತು. ಸ್ವಾಧೀನಪಡಿಸಿದ ಮಾಲಿನ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೋಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ಮಾಲುಗಳು ಬೆಲೆ ಬಾಳುವ ವಸ್ತುಗಳಾಗಿದ್ದು, ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ಮಾಲುಗಳ ವಾರಸುದಾರರನ್ನು ಪತ್ತೆ ಮಾಡಲು ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಸಿ.ಸಿ.ಬಿ ಪಿ.ಎಫ್ ನಂಬರ್ | ಮಾಲಿನ ವಿವರ |
|---|---|---|
| 1 | 42/03 | ಒಂದು ಮೋಟಾರಾಲಾ ಮೊಬೈಲ್ |
| | | ಒಂದು ಟೈಟನ್ ರಿಸ್ಟ್ ಕೈ ಗಡಿಯಾರ |

ಸಹಾಯಕ ಪೊಲೀಸ್ ಕಮೀಷನರ್,
ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

ಪಿ.ಆರ್. 136

## ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ ದಿನಾಂಕ:19ನೇ ಜನವರಿ 2006.

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಜ್ಞಾನಭಾರತಿ ಪಿ.ಎಸ್ 146/03 ಕಲಂ 457, 380 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಜ್ಞಾನಭಾರತಿ ಪಿ.ಎಸ್ 146/03 ಕಲಂ 457, 380 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 11.04.04 ರಂದು ಆರೋಪಿಗಳಾದ

1.ಮೊಹಮ್ಮದ್ ಇಮ್ರಾನ್ @ ಇಮ್ರಾನ್ ಬಿನ್ ಯಾಸಿನ್ ವಯಸ್ಸು 32 ವರ್ಷ, ವಾಸ ನಂ. 442, ಪುರ್ವಫಯಾಜ್ ಆಲಿ ಮೀರಜ್ ಸಿಟಿ, ಉತ್ತರ ಪ್ರದೇಶ ರಾಜ್ಯ.

2.ಅನ್ವರ ಸರ್ತಾಜ್ @ ಅನ್ವರ್ ಬಿನ್ ಅಬ್ದುಲ್ ಸತ್ತಾರ್ ವಯಸ್ಸು 32 ವರ್ಷ, ವಾಸ ಇಲಾಖಾಸಾಮ್ ನಗರ, ಜೋಪಾಲ್ ಕಿ ಕೋಟಿ ಹಿಂಭಾಗ, 6ನೇ ಗಲ್ಲಿ, ಮೀರಜ್ ಟೌನ್ ಉತ್ತರ ಪ್ರದೇಶ.

ಎಂಬುವವರನ್ನು ದಸ್ತಗಿರಿ ಮಾಡಿ, ಸದರಿ ಆರೋಪಿಗಳು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ಮಾಲುಗಳನ್ನು ಸ್ವಾಧೀನ ಪಡಿಸಲಾಗಿತ್ತು. ಸ್ವಾಧೀನಪಡಿಸಿದ ಮಾಲಿನ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೋಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ಮಾಲುಗಳು ಬೆಲೆ ಬಾಳುವ ವಸ್ತುಗಳಾಗಿದ್ದು,

ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ಮಾಲುಗಳ ವಾರಸುದಾರರನ್ನು ಪತ್ತೆ ಮಾಡಲು ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಸಿ.ಸಿ.ಬಿ ಪಿ.ಎಫ್ ನಂಬರ್ | ಮಾಲಿನ ವಿವರ |
|---|---|---|
| 1 | .26/04. | 1. ಒಂದು ನೋಕಿಯಾ ಮೊಬೈಲ್<br>2. ಒಂದು ಸ್ಯಾಮ್ ಸಂಗ್ ಮೊಬೈಲ್<br>3. ಒಂದು ಸೋನಿ ಮೊಬೈಲ್<br>4. ಒಂದು ಸಿಮನ್ಸ್ ಮೊಬೈಲ್<br>5. ಒಂದು ನೋಕಿಯಾ ಮೊಬೈಲ್ |

ಸಹಾಯಕ ಪೊಲೀಸ್ ಕಮೀಷನರ್,

ಪಿ.ಆರ್. 137 ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

**ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ**

**ದಿನಾಂಕ:19ನೇ ಜನವರಿ 2006.**

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಬನಶಂಕರಿ ಪಿ.ಎಸ್ 608/04 ಕಲಂ 379 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಬನಶಂಕರಿ ಪಿ.ಎಸ್ 608/04 ಕಲಂ 379 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 18–05–04 ರಂದು ಆರೋಪಿತನಾದ

1. ಎನ್. ನಾಗರಾಜ ಬಿನ್ ವೈದ್ಯಲಿಂಗಂ, ವಯಸ್ಸು 35 ವರ್ಷ, ವಾಸ ತೆನಂಚಾರ್ ನನ್ನಿಲ್ಲಾಂ ತಾಲ್ಲೂಕು, ತಿರುವಾರ್ ಡಿಸ್ಟ್ರಿಕ್ಟ್ ತಮಿಳುನಾಡು.

ಈತನನ್ನು ದಸ್ತಗಿರಿ ಮಾಡಿದ್ದು, ಸದರಿ ಆರೋಪಿತನು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ವಾಹನಗಳನ್ನು ಸ್ವಾಧೀನ ಪಡಿಸಲಾಗಿತ್ತು. ಸ್ವಾಧೀನಪಡಿಸಿದ ವಾಹನಗಳ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ವಾಹನಗಳು ಬೆಲೆ ಬಾಳುವ ವಸ್ತುಗಳಾಗಿದ್ದು, ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ವಾಹನಗಳ ವಾರಸುದಾರರನ್ನು ಪತ್ತೆ ಮಾಡಲು ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಸಿ.ಸಿ.ಬಿ ಪಿ.ಎಫ್ ನಂಬರ್ | ವಾಹನದ ವಿವರ |
|---|---|---|
| 1 | 36/04 | 1. ಒಂದು ಬಿಳಿ ಮಾರುತಿ ಓಮಿನಿ ಕಾರ್,<br>ರಿಜಿಸ್ಟರ್ ನಂ.TN-09 C-1197<br>ಚಾಸಿಸ್ ನಂ. F8BIN-644268, ಇಂಜಿನ್ ನಂ. SG91IN 880656 |
| 2 | 37/04 | 1. ಒಂದು ನೀಲಿ ಮಾರುತಿ ಓಮಿನಿ ಕಾರ್<br>ರಿಜಿಸ್ಟರ್ ನಂ. TN-04 Z- 2435,<br>ಚಾಸಿಸ್ ನಂ. ST 91IN 943814, ಇಂಜಿನ್ ನಂಬರ್ ಉಜ್ಜಿ ತೆಗೆಯಲಾಗಿದೆ. |

ಸಹಾಯಕ ಪೊಲೀಸ್ ಕಮೀಷನರ್,

ಪಿ.ಆರ್. 138 ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

**ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ**

**ದಿನಾಂಕ:19ನೇ ಜನವರಿ 2006.**

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಹಲಸೂರು ಪಿ.ಎಸ್ ಮೊ.ಸಂ 494/04 ಕಲಂ 379 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಹಲಸೂರು ಪಿ.ಎಸ್ ಮೊ.ಸಂ 494/04 ಕಲಂ 379 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 22.06.04 ರಂದು ಆರೋಪಿತನಾದ

1. ಎನ್. ನಾಗರಾಜ ಬಿನ್ ವೈದ್ಯಲಿಂಗಂ, ವಯಸ್ಸು 35 ವರ್ಷ, ವಾಸ ತೆನಂಚಾರ್ ನನ್ನಿಲ್ಲಾಂ ತಾಲ್ಲೂಕು, ತಿರುವಾರ್ ಡಿಸ್ಟ್ರಿಕ್ಟ್ ತಮಿಳುನಾಡು

ಈತನನ್ನು ದಸ್ತಗಿರಿ ಮಾಡಿ, ಸದರಿ ಆರೋಪಿತನು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ವಾಹನವನ್ನು ಸ್ವಾಧೀನಪಡಿಸಲಾಗಿತ್ತು. ಸ್ವಾಧೀನಪಡಿಸಿದ ವಾಹನದ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ವಾಹನ ಬೆಲೆ ಬಾಳುವ ವಾಹನವಾಗಿದ್ದು, ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ವಾಹನದ ವಾರಸುದಾರರನ್ನು ಪತ್ತೆ ಮಾಡಲು ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಸಿ.ಸಿ.ಬಿ ಪಿ.ಎಫ್ ನಂಬರ್ | ವಾಹನದ ವಿವರ |
|---|---|---|
| 1 | 40/04 | ಒಂದು ಬಿಳಿ ಬಣ್ಣದ ಮಾರುತಿ ಓಮಿನಿ ಕಾರ್ ನಕಲಿ ರಿಜಿಸ್ಟರ್ ನಂ. TN-20 E-9699 ಚಾಸಿಸ್ ನಂಬರ್ ಮತ್ತು ಇಂಜಿನ್ ನಂಬರ್ ಉಜ್ಜಿ ತೆಗೆಯಲಾಗಿದೆ. |

ಸಹಾಯಕ ಪೊಲೀಸ್ ಕಮೀಷನರ್,

ಪಿ.ಆರ್. 139 ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

**ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ**

**ದಿನಾಂಕ:19ನೇ ಜನವರಿ 2006.**

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಮೈಕೋ ಲೇಔಟ್ ಪಿ.ಎಸ್ ಮೊ.ಸಂ 724/03 ಕಲಂ 454, 457, 380 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಮೈಕೋ ಲೇಔಟ್ ಪಿ.ಎಸ್ ಮೊ.ಸಂ 724/03 ಕಲಂ 454, 457, 380 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 23–08–04 ರಂದು ಆರೋಪಿ

ಸತೀಶ ಬಿನ್ ಲೇಟ್ ರಂಗಸ್ವಾಮಿ , ವಯಸ್ಸು 32 ವರ್ಷ, ವಾಸ ಈಶ್ವರ ದೇವಸ್ಥಾನದ ಹಿಂಭಾಗ, ಜೈ ಮಾರುತಿ ನಗರ ನಂದಿನಿ ಬಡಾವಣೆ,

ಈತನನ್ನು ದಸ್ತಗಿರಿ ಮಾಡಿ, ಸದರಿ ಆರೋಪಿತನು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ಮಾಲುಗಳನ್ನು ಸ್ವಾಧೀನಪಡಿಸಲಾಗಿತ್ತು. ಸ್ವಾಧೀನಪಡಿಸಿದ ಮಾಲಿನ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ಮಾಲುಗಳು ಬೆಲೆ ಬಾಳುವ ವಸ್ತುಗಳಾಗಿದ್ದು, ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ಮಾಲುಗಳ ವಾರಸುದಾರರನ್ನು ಪತ್ತೆ ಮಾಡಲು ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಸಿ.ಸಿ.ಬಿ ಪಿ.ಎಫ್ ನಂಬರ್ | ಮಾಲಿನ ವಿವರ |
|---|---|---|
| 1 | 43/04 | 1. ಒಂದು ಕೋಹಿನೂರ್ ಕಾರಿನ ಟೇಪ್ ರಿಕಾರ್ಡರ್ ನಂ. ಕೆಇಹೆಚ್‌ಪಿ 4025<br>2. ಒಂದು ಸೋನಿ ಕಾರಿನ ಟೇಪ್ ರಿಕಾರ್ಡರ್<br>3. ಒಂದು ಹೆಚ್ಐ ಪವರ್ ಕಾರಿನ ಟೇಪ್ ರಿಕಾರ್ಡರ್<br>4. ಒಂದು ಕೋಹಿನೂರ್ ಕಾರಿನ ಟೇಪ್ ರಿಕಾರ್ಡರ್ ನಂ. ಕೆಎ 303<br>5. ಒಂದು ಸಿಟಿ 4848 ಕ್ಯೂ ಆರ್ ಕಾರಿನ ಟೇಪ್ ರಿಕಾರ್ಡರ್ |

ಸಹಾಯಕ ಪೊಲೀಸ್ ಕಮೀಷನರ್,

ಪಿ.ಆರ್. 140 ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

**ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ**

**ದಿನಾಂಕ:19ನೇ ಜನವರಿ 2006.**

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಮೈಕೋ ಲೇಔಟ್ ಪಿ.ಎಸ್ ಮೊ.ಸಂ 724/03 ಕಲಂ 454, 457, 380 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಮೈಕೋ ಲೇಔಟ್ ಪಿ.ಎಸ್ ಮೊ.ಸಂ 724/03 ಕಲಂ 454, 457, 380 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 17-10-04 ರಂದು ಆರೋಪಿ

1. ಆಸಿಫ್ ಇಮ್ರಾನ್ ಬಿನ್ ಅಬ್ದುಲ್ ಸತ್ತಾರ್, ವಯಸ್ಸು 21 ವರ್ಷ, ವಾಸ ಟಿಪ್ಪು ಸರ್ಕಲ್, ಚಿಂತಾಮಣಿ ರಸ್ತೆ, ಶ್ರೀನಿವಾಸ ಪುರ, ಕೋಲಾರ ಜಿಲ್ಲೆ.

ಈತನನ್ನು ದಸ್ತಗಿರಿ ಮಾಡಿ, ಸದರಿ ಆರೋಪಿತನು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ವಾಹನವನ್ನು ಸ್ವಾಧೀನಪಡಿಸಲಾಗಿತ್ತು. ಸ್ವಾಧೀನಪಡಿಸಿದ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾಹನದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ವಾಹನ ಬೆಲೆ ಬಾಳುವ ವಾಹನವಾಗಿದ್ದು, ಉಪಯೋಗಿಸದೇ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ವಾಹನದ ವಾರಸುದಾರರನ್ನು ಪತ್ತೆ ಮಾಡಲು ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಪೊಲೀಸ್ ಠಾಣೆ ಮತ್ತು ಮೊ.ಸಂ | ಪಿ.ಎಫ್ ನಂಬರ್ | ವಾಹನದ ವಿವರ |
|---|---|---|---|
| 1 | ಮೈಕೋ ಲೇಔಟ್ ಪಿ.ಎಸ್ ಮೊ.ಸಂ 724/03 ಕಲಂ 454, 457, 380 ಐ.ಪಿ.ಸಿ | 48/04 | 1. ಒಂದು ಕೆಂಪು ಬಣ್ಣದ ಹೀರೋ ಹೊಂಡಾ ರಿಜಿಸ್ಟರ್ ನಂ. ಕೆಎ-04 ಇ-9340 |

ಸಹಾಯಕ ಪೊಲೀಸ್ ಕಮೀಷನರ್,

ಪಿ.ಆರ್. 141 ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

## ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ

**ದಿನಾಂಕ:19ನೇ ಜನವರಿ 2006.**

**ವಿಷಯ:-** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:-** ವಿವೇಕನಗರ ಪೊಲೀಸ್ ಠಾಣೆ ಮೊ.ಸಂ 348/04 ಕಲಂ 395 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ಘನ ನ್ಯಾಯಾಲಯದಲ್ಲಿ ನಿವೇದಿಸುವುದೇನೆಂದರೆ, ವಿವೇಕನಗರ ಪಿ.ಎಸ್ ಮೊ.ಸಂ 348/04 ಕಲಂ 395 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಯವರ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆಯನ್ನು ಪಡೆಯಲಾಗಿತ್ತು. ಈ ಪ್ರಕರಣದ ತನಿಖೆ ಕಾಲದಲ್ಲಿ ಪ್ರಕರಣಕ್ಕೆ ಸಂಬಂಧಪಟ್ಟ ಆರೋಪಿತರಾದ

1. ಶಾನವಾಜ್ ಪಾಶ ಬಿನ್ ಲೇಟ್ ಅನ್ವರ್, ವಯಸ್ಸು 19 ವರ್ಷ, ವಾಸ ನಂ. 29, ಬ್ಲಾಕ್ ನಂ. 3 , ಡಬ್ಲ್ಯೂ ಎಸ್ ಕ್ವಾರ್ಟರ್ಸ್ ಕೋರಮಂಗಲ ಬೆಂಗಳೂರು.
2. ತಸ್ಲೀಂ ಬಾಷಾ ಬಿನ್ ಭಾಷಾ ಸಾಹೇಬ್, ವಯಸ್ಸು 19 ವರ್ಷ, ವಾಸ ನಂ.9, ಈಸ್ಟ್ ಸ್ಟ್ರೀಟ್, ಪಾತೇಗಲ್ಲಿ ನೀಲಸಂದ್ರ ಮುಖ್ಯರಸ್ತೆ, ಬೆಂಗಳೂರು.

ಎಂಬುವವರನ್ನು ದಿನಾಂಕ 22-11-2004 ರಂದು ದಸ್ತಗಿರಿ ಮಾಡಿದ್ದು, ಸದರಿ ಆರೋಪಿಗಳು ಕೊಟ್ಟ ಮಾಹಿತಿಯಂತೆ ಒಂದು ಕ್ವಾಲಿಸ್ ಹಾಗೂ ದ್ವಿ ಚಕ್ರವಾಹನಗಳನ್ನು ಸ್ವಾಧೀನಪಡಿಸಲಾಗಿತ್ತು. ಸ್ವಾಧೀನಪಡಿಸಿದ ದ್ವಿ ಚಕ್ರವಾಹನಗಳಲ್ಲಿ ಈ ಕೆಳಗೆ ನಮೂದಿಸಿರುವ ವಾಹನಗಳ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನ ಪಡಿಸಿಕೊಂಡಿರುವ ವಾಹನಗಳು ಬೆಲೆ ಬಾಳುವ ವಸ್ತುಗಳಾಗಿದ್ದು, ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ವಾಹನಗಳ ವಾರಸುದಾರರನ್ನು ಪತ್ತೆ ಮಾಡಲು ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಸಿ.ಸಿ.ಬಿ ಮಾಲುಪಟ್ಟಿ ಸಂಖ್ಯೆ | ವಾಹನದ ವಿವರ |
|---|---|---|
| 1 | 52/04 | ಒಂದು ಹಸಿರು ಬಣ್ಣದ ಟಿವಿಎಸ್ ಎಕ್ಸ್ ಎಲ್ ರಿಜಿಸ್ಟರ್ ನಂ.TN-29 W-9531, ಚಾಸಿಸ್ ನಂ.A-8054893995, ಇಂಜಿನ್ ನಂ.A-507A117290 |
| 2 | 54/04 | ಒಂದು ಕೆಂಪು ಬಣ್ಣದ ಸುಜುಕಿ ಸಮುರಾಯ್ ರಿಜಿಸ್ಟರ್ ನಂ.TN-29 S- 3165, ಚಾಸಿಸ್ ನಂ. 1902F239035, ಇಂಜಿನ್ ನಂ.1902M287211 |

| ಕ್ರ. ಸಂ | ಸಿ.ಸಿ.ಬಿ ಮಾಲುಪಟ್ಟಿ ಸಂಖ್ಯೆ | ವಾಹನದ ವಿವರ |
|---|---|---|
| 3 | 57/04 | ಒಂದು ಟಿವಿಎಸ್ ಸೂಪರ್ ಎಕ್ಸ್ ಎಲ್<br>ರಿಜಿಸ್ಟರ್ ನಂ.TN-29 Q-8212, ಚಾಸಿಸ್ ನಂ. P1202F53853,<br>ಇಂಜಿನ್ ನಂ 1007M291903 |
| 4 | 74/04 | ಒಂದು ಟಿವಿಎಸ್ ಸೂಪರ್ ಎಕ್ಸ್ ಎಲ್<br>.TN-51 E-4176, ಚಾಸಿಸ್ ನಂ. MD621BD113K08 774,<br>ಇಂಜಿನ್ ನಂ ODIL31020566 |
| 5 | 75/04 | ಒಂದು ಕಪ್ಪು ಬಣ್ಣದ ಹೀರೋ ಹೋಂಡಾ ಸ್ಲೇಂಡರ್<br>ರಿಜಿಸ್ಟರ್ ನಂ.KA-03 AA-6719,<br>ಚಾಸಿಸ್ ನಂ. 02120F57660 |
| 6 | 77/04 | ಒಂದು ಹಸಿರು ಬಣ್ಣದ ಟಿವಿಎಸ್ ಸೂಪರ್ ಎಕ್ಸ್ ಎಲ್<br>ರಿಜಿಸ್ಟರ್ ನಂ.TN-20 J-2750<br>ಚಾಸಿಸ್ ನಂ. P1203F570219, ಇಂಜಿನ್ ನಂ P1203M561886 |
| 7 | 80/04 | ಒಂದು ಹಸಿರು ಬಣ್ಣದ ಟಿವಿಎಸ್ ಸೂಪರ್ ಎಕ್ಸ್ ಎಲ್<br>ರಿಜಿಸ್ಟರ್ ನಂ.TN-20 V 3100,<br>ಚಾಸಿಸ್ ನಂ. P1011F359690, ಇಂಜಿನ್ ನಂ P1011M 355500 |
| 8 | 81/04 | ಒಂದು ಹಸಿರು ಬಣ್ಣದ ಟಿವಿಎಸ್ ಎಕ್ಸ್ ಎಲ್<br>ರಿಜಿಸ್ಟರ್ ನಂ.TN-23 L-2764,<br>ಚಾಸಿಸ್ ನಂ.P1304 F7524, ಇಂಜಿನ್ ನಂ. P1304M757122 |
| 9 | 84/04 | ಒಂದು ಕಪ್ಪು ಬಣ್ಣದ ಹೀರೊ ಹೋಂಡಾ ಸ್ಪ್ಲೇಂಡರ್<br>ರಿಜಿಸ್ಟರ್ ನಂ.TN-09 R 2081, ಚಾಸಿಸ್ ನಂ.00E2 0E24993,<br>ಇಂಜಿನ್ ನಂ 00E18M24913 |
| 10 | 85/04 | 1. ಒಂದು ಕೆಂಪು ಬಣ್ಣದ ಸುಜುಕಿ ಸಮುರಾಯ್<br>ರಿಜಿಸ್ಟರ್ ನಂ. ಇರುವುದಿಲ್ಲ<br>ಚಾಸಿಸ್ ನಂ. 5502F 208742<br>ಇಂಜಿನ್ ನಂ 5902M214732<br>2. ಒಂದು ಸುಜುಕಿ ಸಮುರಾಯ್<br>ರಿಜಿಸ್ಟರ್ ನಂ. ಇರುವುದಿಲ್ಲ<br>ಚಾಸಿಸ್ ನಂ. 7507F525066<br>ಇಂಜಿನ್ ನಂ 7507M568358 |
| 11 | 86/04 | 1. ಒಂದು ಹಸಿರು ಬಣ್ಣದ , ಟಿವಿಎಸ್ ಸೂಪರ್ ಎಕ್ಸ್ ಎಲ್<br>ರಿಜಿಸ್ಟರ್ ನಂ.TN-29 F-3164,<br>ಚಾಸಿಸ್ ನಂ. MD621BD1841A32405,<br>ಇಂಜಿನ್ ನಂ. ODIEL4107226<br>2. ಒಂದು ಹಸಿರು ಬಣ್ಣದ , ಟಿವಿಎಸ್ ಸೂಪರ್ ಎಕ್ಸ್ ಎಲ್<br>ರಿಜಿಸ್ಟರ್ ನಂ. ಇರುವುದಿಲ್ಲ ಚಾಸಿಸ್ ನಂ. P1301F707749,<br>ಇಂಜಿನ್ ನಂ P1301M697251 |
| 12 | 87/04 | ಒಂದು ಹೀರೊ ಹೋಂಡಾ ಸ್ಪ್ಲೇಂಡರ್<br>ರಿಜಿಸ್ಟರ್ ನಂ. TN-31 S-6494,<br>ಚಾಸಿಸ್ ನಂ. 0211F14341<br>ಇಂಜಿನ್ ನಂ 021171386 |
| 13 | 91/04 | ಒಂದು ಸೂಪರ್ ಎಕ್ಸ್ ಎಲ್–ಟಿವಿಎಸ್ ದ್ವಿ ಚಕ್ರ ವಾಹನ<br>ರಿಜಿಸ್ಟರ್ ನಂ. TN-25 H-7019,<br>ಚಾಸಿಸ್ ನಂ. P1211F659136<br>ಇಂಜಿನ್ ನಂ P1211M664969 |

| ಕ್ರ. ಸಂ | ಸಿ.ಸಿ.ಬಿ ಮಾಲುಪಟ್ಟಿ ಸಂಖ್ಯೆ | ವಾಹನದ ವಿವರ |
|---|---|---|
| 14 | 95/04 | ಒಂದು ಹೀರೊ ಹೋಂಡಾ ಸ್ಪ್ಲೇಂಡರ್<br>ರಿಜಿಸ್ಟರ್ ನಂ.TN-27 E-2703,<br>ಚಾಸಿಸ್ ನಂ.OOE20C12104<br>ಇಂಜಿನ್ ನಂ.00E18M12060 |

ಸಹಾಯಕ ಪೊಲೀಸ್ ಕಮೀಷನರ್,

ಪಿ.ಆರ್. 142 ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

**ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ**

**ದಿನಾಂಕ:19ನೇ ಜನವರಿ 2006.**

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಅಶೋಕನಗರ ಪಿ.ಎಸ್ ಮೊ.ಸಂ 727/04 ಕಲಂ 457, 380 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಅಶೋಕನಗರ ಪಿ.ಎಸ್ ಮೊ.ಸಂ 727/04 ಕಲಂ 457, 380 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 27–07–05 ರಂದು ಆರೋಪಿ

ಬಾಬ್ ಜಾನ್ ಬಿನ್ ಸರ್ದಾರ್, ವಯಸ್ಸು 28 ವರ್ಷ, ವಾಸ ನಂ. 26, 2ನೇ ಕ್ರಾಸ್, ಸಮದನಗರ, ಬಾಲಾಜಿ ಬಾರ್ ಹಿಂಬಾಗ, ಕೆ.ಜಿ ಹಳ್ಳಿ, ಬೆಂಗಳೂರು.79.

ಈತನನ್ನು ದಸ್ತಗಿರಿ ಮಾಡಿ, ಸದರಿ ಆರೋಪಿತನು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ಮಾಲನ್ನು ಸ್ವಾಧೀನಪಡಿಸಲಾಗಿತ್ತು. ಸ್ವಾಧೀನಪಡಿಸಿದ ಮಾಲಿನ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೋಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ಮಾಲು ಬೆಲೆ ಬಾಳುವ ವಸ್ತುವಾಗಿದ್ದು, ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ಮಾಲಿನ ವಾರಸುದಾರರನ್ನು ಪತ್ತೆ ಮಾಡಲು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೆನೆ.

| ಕ್ರ. ಸಂ | ಸಿ.ಸಿ.ಬಿ ಪಿ.ಎಫ್ ನಂಬರ್ | ಮಾಲಿನ ವಿವರ |
|---|---|---|
| 1 | 46/05 | 1. ಒಂದು ಕಪ್ಪು ಬಣ್ಣದ ಫಿಲಿಪ್ಸ್ ರೇಡಿಯೋ ವಿತ್ ಟೂ ಸ್ಪೀಕರ್ಸ್ |

ಸಹಾಯಕ ಪೊಲೀಸ್ ಕಮೀಷನರ್,

ಪಿ.ಆರ್. 143 ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

**ಮಾನ್ಯ 1ನೇ ಎ.ಸಿ.ಎಂ.ಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿದಾನಕ್ಕೆ ಬೆಂಗಳೂರು ನಗರ**

**ದಿನಾಂಕ:19ನೇ ಜನವರಿ 2006.**

**ವಿಷಯ:–** ವಾರಸುದಾರರು ಪತ್ತೆಯಾಗದೆ ಇರುವ ಮಾಲುಗಳ ವಾರಸುದಾರರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:–** ಅಶೋಕನಗರ ಪಿ.ಎಸ್ ಮೊ.ಸಂ 727/04 ಕಲಂ 457, 380 ಐ.ಪಿ.ಸಿ

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ಈ ಮೂಲಕ ಕೋರುವುದೇನೆಂದರೆ, ಅಶೋಕನಗರ ಪಿ.ಎಸ್ ಮೊ.ಸಂ 727/04 ಕಲಂ 457, 380 ಐ.ಪಿ.ಸಿ ಕೇಸಿನ ಕಡತವನ್ನು ಮೇಲಾಧಿಕಾರಿಗಳ ಆದೇಶದಂತೆ ಹೆಚ್ಚಿನ ತನಿಖೆಗಾಗಿ ಸಿ.ಸಿ.ಬಿ ಹೆಚ್ ಅಂಡ್ ಬಿ ದಳಕ್ಕೆ ವರ್ಗಾವಣೆ ಪಡೆದುಕೊಂಡು ಪ್ರಕರಣದ ತನಿಖೆಯ ಕಾಲದಲ್ಲಿ ದಿನಾಂಕ 16–08–04 ರಂದು ಆರೋಪಿ

ಏಜಿ ಮೊಹಮ್ಮದ್ ಬಿನ್ ಇಬ್ರಾಹಿಂ ವಯಸ್ಸು 20 ವರ್ಷ, ಗುಳುಂಬು ಹೌಸ್, ಅಜ್ಜವಾರ ಗ್ರಾಮ, ಸೂಳ್ಯ ತಾಲ್ಲೂಕು,

ಈತನನ್ನು ದಸ್ತಗಿರಿ ಮಾಡಿ, ಸದರಿ ಆರೋಪಿತನು ಕೊಟ್ಟ ಮಾಹಿತಿಯಂತೆ ಈ ಕೆಳಗೆ ನಮೂದಿಸಿರುವ ಮಾಲುಗಳನ್ನು ಸ್ವಾಧೀನಪಡಿಸಲಾಗಿತ್ತು. ಸ್ವಾಧೀನಪಡಿಸಿದ ಮಾಲಿನ ವಾರಸುದಾರರನ್ನು ಪತ್ತೆ ಮಾಡಲು ಮಾಡಿರುವ ಎಲ್ಲಾ ಪ್ರಯತ್ನಗಳಿಂದ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾರಸುದಾರರನ್ನು ಪತ್ತೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಕಟಣೆಗೊಳಿಸಿರುತ್ತೆ ಹಾಗೂ ನಗರದ ಪೋಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ಪ್ರಯತ್ನಿಸಿದ್ದು, ಇದುವರೆವಿಗೂ ಯಾವುದೇ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸ್ವಾಧೀನಪಡಿಸಿಕೊಂಡಿರುವ ಮಾಲುಗಳು ಬೆಲೆ ಬಾಳುವ ವಸ್ತುಗಳಾಗಿದ್ದು, ಉಪಯೋಗಿಸದೆ ಹಾಗೆಯೇ ಇಟ್ಟುಕೊಂಡಲ್ಲಿ ಹಾಳಾಗುವ ಸಾಧ್ಯತೆಗಳು ಇರುತ್ತವೆ, ಆದುದರಿಂದ ಸದರಿ ಮಾಲುಗಳ

ವಾರಸುದಾರರನ್ನು ಪತ್ತೆ ಮಾಡಲು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲು ಅನುಮತಿಯನ್ನು ನೀಡಬೇಕೆಂದು ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಂಡಿರುತ್ತೇನೆ.

| ಕ್ರ. ಸಂ | ಸಿ.ಸಿ.ಬಿ ಪಿ.ಎಫ್ ನಂಬರ್ | ಮಾಲಿನ ವಿವರ |
|---|---|---|
| 1 | 49/05 | 1. ಒಂದು ತಿಳಿ ಕೇಸರಿ ಬಣ್ಣದ ನೋಕಿಯಾ ಮೊಬೈಲ್ ಫೋನ್ ಮಾಡಲ್ 2100<br>2. ಒಂದು ಕಪ್ಪು ಬಣ್ಣದ ನೋಕಿಯಾ ಮೊಬೈಲ್ ಫೋನ್ ಮಾಡಲ್ 1100<br>3. ಒಂದು ಗ್ರೇ ಬಣ್ಣದ ನೋಕಿಯಾ ಮೊಬೈಲ್ ಫೋನ್ ಮಾಡಲ್ 1100<br>4. ಒಂದು ನೋಕಿಯಾ ಮೊಬೈಲ್ ಫೋನ್ ಮಾಡಲ್ 1100 |

ಸಹಾಯಕ ಪೊಲೀಸ್ ಕಮೀಷನರ್,
ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ) ಬೆಂಗಳೂರು ನಗರ - 560 009

ಪಿ.ಆರ್. 144

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ

### ಸಾರ್ವಜನಿಕ ನೋಟೀಸ್

**ಸಂಖ್ಯೆ: ಡಬ್ಲ್ಯೂಸಿಎ:11:2006, ದಿನಾಂಕ: 16ನೇ ಜನವರಿ 2006**

**ಅರ್ಜಿದಾರರು:**

1. ಶ್ರೀಮತಿ ಆಶಾಮಣಿ ಕೋಂ ಲೇಟ್ ಕೆ.ವಿ. ನಟರಾಜು
2. ಹರ್ಷಿತ್ ಬಿನ್ ಲೇಟ್ ಕೆ.ಟಿ. ನಟರಾಜು
3. ಆಕರ್ಷ ಬಿನ್ ಲೇಟ್ ಕೆ.ವಿ. ನಟರಾಜು
ಚಾಮರಾಜನಗರ ಟೌನ್, ಚಾಮರಾಜನಗರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಕೆ.ಎನ್. ಸುಬ್ಬಣ್ಣ ಬಿನ್ ಮುದ್ದುಶೆಟ್ಟಿ
ಮರೀಗೌಡ ಬಡಾವಣೆ, ಮಂಡ್ಯ.
2. ವಿಭಾಗೀಯ ವ್ಯವಸ್ಥಾಪಕರು,
ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ. ಲಿ.,
ಜೆ.ಎಲ್.ಬಿ. ರಸ್ತೆ, ಚಾಮುಂಡಿಪುರಂ, ಮೈಸೂರು.

ಮೃತ ಕೆ.ವಿ. ನಟರಾಜು ಇವರ ಹೆಂಡತಿಯಾದ ಆಶಾಮಣಿ (1ನೇ ಅರ್ಜಿದಾರರು) ಹರ್ಷಿತ ಮತ್ತು ಆಕರ್ಷ (2ನೇ ಮತ್ತು 3ನೇ ಅರ್ಜಿದಾರರು) ಮೃತ ಕೆ.ವಿ. ನಟರಾಜು ಇವರ ಅಪ್ರಾಪ್ತ ವಯಸ್ಸಿನ ಮಕ್ಕಳಾಗಿದ್ದು ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 13.1.2006 ರಂದು ಅರ್ಜಿ ಸಲ್ಲಿಸಿ, 1ನೇ ಪ್ರತಿವಾದಿಯವರ ಲಾರಿಯಲ್ಲಿ ಲೋಡರ್ ಅನ್‌ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ ದಿನಾಂಕ:31.10.2005 ರಂದು ಮರಣ ಹೊಂದಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಅಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರೀಕರಿಗೂ ಹಾಗೂ ಸದರಿ ಮೃತನ ಬೇರೆ ಅಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ.

ಪಿ.ಆರ್. 145

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ

### ಸಾರ್ವಜನಿಕ ನೋಟೀಸ್

**ಸಂಖ್ಯೆ: ಡಬ್ಲ್ಯೂಸಿಎ:105:05-06, ದಿನಾಂಕ: 3ನೇ ಜನವರಿ 2006**

**ಅರ್ಜಿದಾರರು:**

ಚಿಕ್ಕಣ್ಣ ಬಿನ್ ಚಿಕ್ಕಣ್ಣ
ರಂಗಮ್ಮ ಕೋಂ ಚಿಕ್ಕಣ್ಣ ನಾಯಕರ ಬೀದಿ,
3ನೇ ಕ್ರಾಸ್, ಚಾಮರಾಜನಗರ.

**ವಿರುದ್ಧ**

**ಪ್ರತಿವಾದಿಗಳು:**

1. ಮಾನೇಗೌಡ ಬಿನ್ ಕಾಳಯ್ಯ, ನಂ:7,67ಎ, 5ನೇ ತಿರುವು,
ಜೇಡರಹಳ್ಳಿ, ರಾಜಾಜಿನಗರ, ಬೆಂಗಳೂರು-10
2. ವಿಭಾಗೀಯ ವ್ಯವಸ್ಥಾಪಕರು,
ನ್ಯೂ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಜೆ.ಎಲ್.ಬಿ. ರಸ್ತೆ,
ಚಾಮುಂಡಿಪುರಂ, ಮೈಸೂರು.

ಮೃತ ಯುವರಾಜ್‌ಕುಮಾರ್ ಇವರ ತಂದೆಯಾದ ಚಿಕ್ಕಣ್ಣ (1ನೇ ಅರ್ಜಿದಾರರು) ಹಾಗೂ ತಾಯಿಯಾದ ರಂಗಮ್ಮ (2ನೇ ಅರ್ಜಿದಾರರು), ನಾಯಕರ ಬೀದಿ, 3ನೇ ಕ್ರಾಸ್, ಚಾಮರಾಜನಗರ ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 28.12.2005 ರಂದು ಅರ್ಜಿ ಸಲ್ಲಿಸಿ, 1ನೇ ಪ್ರತಿವಾದಿಯ ಮಾರುತಿ ವ್ಯಾನ್‌ನಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತದಿಂದ ದಿನಾಂಕ:25.1.2004 ರಂದು ಮರಣ ಹೊಂದಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಅಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರೀಕರಿಗೂ ಹಾಗೂ ಸದರಿ ಮೃತನ ಬೇರೆ ಅಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಾಮರಾಜನಗರ ಜಿಲ್ಲೆ.

ಪಿ.ಆರ್. 146

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ

**ಸಾರ್ವಜನಿಕ ನೋಟೀಸ್**

**ಸಂಖ್ಯೆ: ಡಬ್ಲ್ಯೂಸಿಎ:73:05-06, ದಿನಾಂಕ: 3ನೇ ಜನವರಿ 2006**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಪುಟ್ಟನಂಜಮ್ಮ ಕೋಂ ಲೇಟ್ ಮಹದೇವಶೆಟ್ಟಿ,
ಉಮ್ಮತ್ತೂರು ಗ್ರಾಮ, ಚಾಮರಾಜನಗರ ತಾಲ್ಲೂಕು

ಶ್ರೀ ಅಶೋಕ ಬಿನ್ ಮಹದೇವಪ್ಪ ರೋಡ್ ಕಂಟ್ರಾಕ್ಟರ್,
ಮರಿಯಾಲ ಗ್ರಾಮ, ಕಸಬಾ ಹೋಬಳಿ, ಚಾಮರಾಜನಗರ ತಾಲ್ಲೂಕು

ಮೃತ ಮಹದೇವಶೆಟ್ಟಿ ಇವರ ಹೆಂಡತಿಯಾದ ಪುಟ್ಟನಂಜಮ್ಮ (1ನೇ ಅರ್ಜಿದಾರರು), ಉಮ್ಮತ್ತೂರು ಗ್ರಾಮ, ಚಾಮರಾಜನಗರ ತಾ: ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 28.11.2005 ರಂದು ಅರ್ಜಿ ದಾಖಲಿಸಿ, 1ನೇ ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ತಮ್ಮ ಪತಿ ಮಹದೇವಶೆಟ್ಟಿ ಅಪಘಾತ ಹೊಂದಿ ದಿನಾಂಕ:8.1.2005 ಮರಣ ಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಅಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರೀಕರಿಗೂ ಹಾಗೂ ಸದರಿ ಮೃತನ ಬೇರೆ ಅಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ.

ಪಿ.ಆರ್. 147

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ

**ಸಾರ್ವಜನಿಕ ನೋಟೀಸ್**

**ಸಂಖ್ಯೆ: ಡಬ್ಲ್ಯೂಸಿಎ:70:2005, ದಿನಾಂಕ: 3ನೇ ಜನವರಿ 2006**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಲಲಿತಮ್ಮ ಬಿನ್ ಲೇಟ್ ನಿಂಗಣ್ಣಚಾರಿ,
2. ಎನ್. ಬಸವಣ್ಣ ಬಿನ್ ಲೇಟ್ ನಿಂಗಣ್ಣಚಾರಿ,
   ಕಟ್ನವಾಡಿ, ಹರವೆ ಹೋಬಳಿ, ಚಾಮರಾಜನಗರ ತಾ:
   ಮತ್ತು ಜಿಲ್ಲೆ

1. ಶ್ರೀ ಎ.ಆರ್. ಸ್ವಾಮಿ ಬಿನ್ ರುದ್ರಪ್ಪ, 3ನೇ ಕ್ರಾಸ್,
   ಬಸವೇಶ್ವರ ರೋಡ್, ಅಗ್ರಹಾರ ಮೈಸೂರು.
2. ಮೆ:ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ.,
   ಸಿಟಿ ಬ್ರಾಂಚ್ ಆಫೀಸ್, ನಂ:442:3:4, 2ನೇ ಮಹಡಿ,
   ಚಾಮರಾಜ ಡಬಲ್ ರೋಡ್, ರಾಮಸ್ವಾಮಿ ಸರ್ಕಲ್,
   ಮೈಸೂರು.

ಮೃತ ಸುರೇಶ್ ಇವರ ತಾಯಿಯಾದ ಲಲಿತಮ್ಮ (1ನೇ ಅರ್ಜಿದಾರರು) ಹಾಗೂ ಇವರ ಸಹೋದರನಾದ ಎನ್. ಬಸವಣ್ಣ (2ನೇ ಅರ್ಜಿದಾರರು), ಕಟ್ನವಾಡಿ, ಹರವೆ ಹೋಬಳಿ, ಚಾಮರಾಜನಗರ ತಾ: ಮತ್ತು ಜಿಲ್ಲೆ ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 23.11.2005 ರಂದು ಅರ್ಜಿ ಸಲ್ಲಿಸಿ, 1ನೇ ಪ್ರತಿವಾದಿಯವರ ವಾಹನದಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ದಿನಾಂಕ:1.9.2005 ರಂದು ಮರಣ ಹೊಂದಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಅಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರೀಕರಿಗೂ ಹಾಗೂ ಸದರಿ ಮೃತನ ಬೇರೆ ಅಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ.

ಪಿ.ಆರ್. 148

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಾಮರಾಜನಗರ ಜಿಲ್ಲೆ

**ಸಾರ್ವಜನಿಕ ನೋಟೀಸ್**

**ಸಂಖ್ಯೆ: ಡಬ್ಲ್ಯೂಸಿಎ:10:2003, ದಿನಾಂಕ: 16ನೇ ಜನವರಿ 2006**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ರೇಣುಕ ಕೋಂ ಹೊಂಬಾಳೇಗೌಡ ಉ
   ಹೊನ್ನೇಗೌಡ,
2. ಅಭಿಷೇಕ ಬಿನ್ ಹೊಂಬಾಳೇಗೌಡ ಉ ಹೊನ್ನೇಗೌಡ,
   ಚಾಮುಂಡೇಶ್ವರಿ ದೇವಸ್ಥಾನದ ಬಳಿ, ಚಾಮರಾಜನಗರ.
3. ಅಖಿಲೇಷ ಬಿನ್ ಹೊಂಬಾಳೇಗೌಡ.

1. ಶ್ರೀ ಗುರುಸ್ವಾಮಿ ಬಿನ್ ಲೇಟ್ ಕಾಳೇಗೌಡ,
   ಸ್ಕೂಲ್ ರಸ್ತೆ, ಕಲ್ಲಹಳ್ಳಿ, ಮಂಡ್ಯ ನಗರ.
2. ವಿಭಾಗೀಯ ವ್ಯವಸ್ಥಾಪಕರು,
   ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ರಾಮಸ್ವಾಮಿ ಸರ್ಕಲ್,
   ಮೈಸೂರು

ಮೃತ ಹೊನ್ನೇಗೌಡ ಇವರ ಹೆಂಡತಿಯಾದ ಶ್ರೀಮತಿ ರೇಣುಕ ಹಾಗೂ ಅವರ ಮಕ್ಕಳಾದ ಅಭಿಷೇಕ್ ಮತ್ತು ಅಖಿಲೇಶ್ (ಅಪ್ರಾಪ್ತ ಮಕ್ಕಳು) (2ನೇ ಮತ್ತು 3ನೇ ಅರ್ಜಿದಾರರು), ಚಾಮುಂಡೇಶ್ವರಿ ದೇವಸ್ಥಾನದ ಬಳಿ, ಚಾಮರಾಜನಗರ ಇವರು ಈ ನ್ಯಾಯಾಲಯದಲ್ಲಿ ದಿನಾಂಕ: 13.1.2006 ರಂದು ಅರ್ಜಿ ಸಲ್ಲಿಸಿ, 1ನೇ ಪ್ರತಿವಾದಿಯ ಲಾರಿಯಲ್ಲಿ ಕ್ಲೀನರ್ ಆಗಿ ಕರ್ತವ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ

ದಿನಾಂಕ:14.5.2005 ರಂದು ಮರಣ ಹೊಂದಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಅಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರೀಕರಿಗೂ ಹಾಗೂ ಸದರಿ ಮೃತನ ಬೇರೆ ಅಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವನಾಯಕ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಾಮರಾಜನಗರ ಜಿಲ್ಲೆ.

ಪಿ.ಆರ್. 149

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಕೆಎ-18:769 (ಶಾ ವಾ) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ವಾಹನ ಮಾಲೀಕರು ಶ್ರೀ ಕಾರ್ಯದರ್ಶಿ, ಸಂಜೀವಿನಿ ವಿದ್ಯಾ ಸಂಸ್ಥೆ, ಚಿಕ್ಕಮಗಳೂರು ಇವರ ಅರ್ಜಿ ದಿನಾಂಕ 24.12.2002.
2. ಐ ಎಂ ವಿ ರವರ ವರದಿ ದಿನಾಂಕ 27.12.2002.

ವಾಹನ ಸಂ: ಕೆಎ-18:769 (ಶಾಲಾ ವಾಹನ) ವಾಹನದ ನೊಂದಾಯಿತ ಮಾಲೀಕರಾದ ಶ್ರೀ ಕಾರ್ಯದರ್ಶಿ, ಸಂಜೀವಿನಿ ವಿದ್ಯಾ ಸಂಸ್ಥೆ, ಚಿಮ ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ:28.2.2003 ರವರೆಗೆ ಪಾವತಿಸಿದ್ದು, ದಿ: 24.12.02 ರಂದು ಕಛೇರಿಗೆ ಸದರಿ ವಾಹನ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಆ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಭಾರಿ ಆಗಿರುವುದರಿಂದ ನೊಂದಣಿ ರದ್ದುಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ಸ್ಥಿತಿಗತಿ ಪರಿಶೀಲಿಸಿ ಕಛೇರಿಯ ಐ ಎಂವಿ ರವರು ದಿ: 27.12.2002 ವರದಿ ನೀಡಿ ವಾಹನ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

### ಆದೇಶ ಸಂ: ಪ್ರಾಸಾಅ:ಚಿಮ:ನೊಂದಣಿ:04-05-06, ದಿನಾಂಕ: 24ನೇ ಸೆಪ್ಟೆಂಬರ್ 2005

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂ: ಕೆಎ-18:769 (ಶಾಲಾ ವಾಹನ) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

### ವಾಹನದ ವಿವರಗಳು

| | | | |
|---|---|---|---|
| 1. | ವಾಹನ ಸಂ | : | ಕೆಎ-18:769 |
| 2. | ವರ್ಗ | : | ಶಾಲಾ ವಾಹನ |
| 3. | ಚಾಸಿಸ್ ಸಂ | : | 344050040970 |
| 4. | ಇಂಜಿನ್ ಸಂ | : | 692 ಡಿ 03043216 |
| 5. | ಮಾಡೆಲ್ | : | 1978 |
| 6. | ಹೆಚ್ ಪಿ ಎ | : | ಇರುವುದಿಲ್ಲ |
| 7. | ಮಾಲೀಕರು | : | ಕಾರ್ಯದರ್ಶಿ, ಸಂಜೀವಿನಿ ವಿದ್ಯಾ ಸಂಸ್ಥೆ, ಹುಡ್ಕೋ ಕಾಲೋನಿ, ಚಿಕ್ಕಮಗಳೂರು. |

**ಆರ್. ರಾಜಶೇಖರ್**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

ಪಿ.ಆರ್. 150

## ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ,
## ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ರವರ ನಡವಳಿಗಳು

### ಕ್ರಮಾಂಕ:ಡಿಆರ್‌ಬಿ/ಸಮಾಪನೆ/31/2005-06, ದಿನಾಂಕ: 17ನೇ ಜನವರಿ 2006

**ವಿಷಯ:** ಸಮಾಪನೆಯಲ್ಲಿರುವ ಶ್ರೀ ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.1056, 'ಸಿ' ಕ್ರಾಸ್, ಪೈಪ್‌ಲೈನ್ ರಸ್ತೆ, ಯಶವಂತಪುರ ಬೆಂಗಳೂರು-22 ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ 9.11.2005ರ ನೋಟೀಸು
2. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ 13.12.2005ರ ಆದೇಶ.
3. ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಮಾಪನಾಧಿಕಾರಿ ಶ್ರೀ ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರದ ದಿನಾಂಕ 9.1.2006.

**ಪ್ರಸ್ತಾವನೆ:**

ಶ್ರೀ ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿಯಮಿತ. ನಂ. 1056, 'ಸಿ' ಕ್ರಾಸ್, ಪೈಪ್‌ಲೈನ್ ರಸ್ತೆ, ಯಶವಂತಪುರ ಬೆಂಗಳೂರು-560 022 ಈ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುವುದಾಗಿ ಈ ಕಛೇರಿಯ ಗಮನಕ್ಕೆ ತರಲಾಗಿದ್ದು, ಈ ಹಿನ್ನಲೆಯಲ್ಲಿ ಸದರಿ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಮನಗಂಡು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಇವರು ಅವರ ದಿನಾಂಕ:22-12-2004 ರ ಪ್ರಕಟಣೆಯ ರೀತ್ಯಾ ಮೇಲ್ಕಂಡ ಸಂಘದ ಹೆಸರನ್ನು ದಿನಾಂಕ:2-3-2005 ರ "ಸಂಜೆವಾಣಿ" ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ, ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ

ಸಂಘದ ಸದಸ್ಯರಾಗಲೀ ಆಡಳಿತ ಮಂಡಳಿಯ ಸದಸ್ಯರಾಗಲೀ ಅಥವಾ ಸಾರ್ವಜನಿಕರಾಗಲೀ ಹಣಕಾಸು ಸಂಸ್ಥೆಗಳಾಗಲೀ ಏನಾದರೂ ಆಕ್ಷೇಪಣೆಗಳಿದ್ದಲ್ಲಿ, ಈ ಪತ್ರಿಕಾ ಪ್ರಕಟಣೆ ಹೊರಡಿಸಿದ 15 ದಿನಗಳ ಒಳಗಾಗಿ ಆಕ್ಷೇಪಣೆಯನ್ನು ಸಮರ್ಥಿಸುವ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ಸೂಚನೆ ನೀಡಲಾಗಿತ್ತು. ತದನಂತರ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ (1) ರಲ್ಲಿ ಕಾಣಿಸಿರುವ ದಿನಾಂಕ: 19-11-2005 ರ ನೋಟೀಸಿನಲ್ಲಿ ಸದರಿ ಸಹಕಾರ ಸಂಘವನ್ನು 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 ರನ್ವಯ ಸಮಾಪನೆಗೊಳಿಸಿ ಸಂಘದ ನೊಂದಣಿಯನ್ನು ಏಕೆ ರದ್ದುಪಡಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರಿ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು ಆದರೆ. ಸದರಿ ನೋಟೀಸು ಸ್ವೀಕೃತಗೊಳ್ಳದೇ ಅಂಚೆ ಇಲಾಖೆಯಿಂದ ಹಿಂದುರುಗಿಸಲ್ಪಟ್ಟಿರುವುದರಿಂದ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 (2) ರ ರೀತ್ಯಾ ಹೊರಡಿಸಿರುವ ಉಲ್ಲೇಖ (2) ರಲ್ಲಿ ಕಾಣಿಸಿರುವ ದಿನಾಂಕ:13-12-2005 ರ ಆದೇಶದನ್ವಯ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿದ್ದು, ಸದರಿ ಕಾಯ್ದೆಯ ಕಲಂ 73 ರನ್ವಯ ಸಹಕಾರಿ ಅಭಿವೃದ್ಧಿ ಅಧಿಕಾರಿ ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಲಾಗಿತ್ತು.

ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಉಲ್ಲೇಖ (3) ರಲ್ಲಿ ಕಾಣಿಸಿರುವ ಅವರ ದಿನಾಂಕ: 09-01-2006 ರ ಪತ್ರದಲ್ಲಿ ದಿನಾಂಕ:07-01-2006 ರಂದು ಮೇಲ್ಕಂಡ ಸಹಕಾರ ಸಂಘದ ಸಮಾಪನಾಧಿಕಾರಿಯ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಅವರು ಮುಂದುವರಿದು, ಸಂಘದಲ್ಲಿರುವ ಲೆಕ್ಕ ಪುಸ್ತಕಗಳನ್ನು ಪರಿಶೀಲಿಸಲಾಗಿ ಸಂಘದ ಲೆಕ್ಕ-ಪುಸ್ತಕಗಳು 2001-2002 ನೇ ಸಾಲಿನವರೆಗೆ ಲೆಕ್ಕಪರಿಶೋಧನೆಯಾಗಿದ್ದು, ತದನಂತರ ಸಂಘದ ಲೆಕ್ಕಪುಸ್ತಕಗಳನ್ನು ಸಂಘದಲ್ಲಿ ನಿರ್ವಹಿಸಿದ್ದು, ಸಂಘವು ಪ್ರತಿವರ್ಷ ವಾರ್ಷಿಕ ಸರ್ವಸದಸ್ಯರ ಮಹಾಸಭೆಯನ್ನು ನಡೆಸಿರುವುದಾಗಿ ತಿಳಿಸಿರುತ್ತಾರೆ. ಸಂಘದ ಹಿಂದಿನ ಆಡಳಿತ ಮಂಡಳಿಯು ಆಗಿಂದಾಗ್ಗೆ ಆಡಳಿತ ಮಂಡಳಿ ಸಭೆಯನ್ನು ನಡೆಸಿದ್ದು. ತಹಲ್‌ವರೆವಿಗೂ ಸಭೆಯ ನಡೆವಳಿಗಳನ್ನು ದಾಖಲಿಸಿರುವುದಾಗಿ ಅವರು ತಿಳಿಸಿರುತ್ತಾರೆ. ಈ ಸಹಕಾರ ಸಂಘವು ಹಾಲಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಪಡಿತರ ವ್ಯಾಪಾರ ವಹಿವಾಟನ್ನು ಪರವಾನಗಿ ಸಂಖ್ಯೆ 585 ರಲ್ಲಿ 1992 ರಿಂದ ಸತತವಾಗಿ ನಿರ್ವಹಿಸಿಕೊಂಡು ಬಂದಿದ್ದು, ಹಾಲಿ 400 ಬಿಪಿಎಲ್ ಹಾಗೂ 217 ಎಪಿಎಲ್ ಕಾರ್ಡುಗಳನ್ನು ಹೊಂದಿದ್ದು ಕಾರ್ಯ-ಚಟುವಟಿಕೆ ನಡೆಸುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಗೊಳಿಸಿ ಸಂಘವನ್ನು ಕೆಲವು ಷರತ್ತಿಗೆ ಒಳಪಟ್ಟು ಪುನಃಶ್ಚೇತನಗೊಳಿಸುವಂತೆ ಹಾಗೂ ಸಂಘವನ್ನು ಕಾರ್ಯನಿರತ ಸಹಕಾರ ಸಂಘಗಳ ಪಟ್ಟಿಗೆ ಸೇರಿಸುವಂತೆ ಅವರು ಕೋರಿರುತ್ತಾರೆ. ಸಂಘದ ಹಾಲಿ ಇರುವ ಆಡಳಿತ ಮಂಡಳಿಯು 2004-05 ರಿಂದ 2008-09 ರ 5 ವರ್ಷಗಳ ಅವಧಿಗೆ ದಿನಾಂಕ:12-03-2004 ರಂದು ಆಯ್ಕೆಯಾಗಿದ್ದು, ಈ ಹಿನ್ನೆಲೆಯಲ್ಲಿ ಸದರಿ ಆಡಳಿತ ಮಂಡಳಿಯನ್ನೇ ಮುಂದುವರಿಸುವಂತೆ ಅವರು ಕೋರಿರುತ್ತಾರೆ.

ಸಂಘದ ಸಮಾಪನಾಧಿಕಾರಿಯವರ ಪ್ರಸ್ತಾವವನ್ನು ಪರಿಶೀಲಿಸಿದೆ. ಅವರು ಒದಗಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಮೇಲ್ಕಂಡ ಸಹಕಾರ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಿರುವುದು ಕಂಡುಬಂದಿದ್ದು, ಈ ಹಿನ್ನೆಲೆಯಲ್ಲಿ ಕೆಲವು ಷರತ್ತುಗಳಿಗೆ ಒಳಪಟ್ಟು ಸಂಘವನ್ನು ಸಮಾಪನೆಗೊಳಿಸಿರುವುದನ್ನು ರದ್ದುಪಡಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 (3) ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯು/69/ಸಿಎಲ್‌ಎಂ/2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ.ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಆದ ನಾನು ಶ್ರೀ ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿಯಮಿತ. ನಂ.1056, 'ಸಿ' ಕ್ರಾಸ್, ಫೈವ್ ಲೈನ್ ರಸ್ತೆ, ಯಶವಂತಪುರ ಬೆಂಗಳೂರು 22 ಈ ಸಹಕಾರ ಸಂಘವನ್ನು ಕಲಂ 72(2) ರನ್ವಯ ಹೊರಡಿಸಿರುವ ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ: 13.12.2005 ರ ಆದೇಶದ ರೀತ್ಯಾ ಸಮಾಪನೆಗೊಳಿಸಿರುವುದನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಆದೇಶಿಸಿರುತ್ತೇನೆ ಹಾಗೂ

ಸದರಿ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಸಂಘದ ಈ ಹಿಂದಿನ ಆಡಳಿತ ಮಂಡಳಿಯು 2004-05 ರಿಂದ 2008-09ನೇ ಸಾಲುಗಳ ಅವಧಿಗೆ ಆಯ್ಕೆಯಾಗಿರುವುದರಿಂದ, ಈ ಆಡಳಿತ ಮಂಡಳಿ ಹಾಗೂ ಪದಾಧಿಕಾರಿಗಳು ಅವರ ಅವಧಿ ಮುಗಿಯುವವರೆಗೆ ಮುಂದುವರಿಯತಕ್ಕದ್ದು ಎಂದೂ ಈ ಮೂಲಕ ಆದೇಶಿಸಲಾಗಿದೆ

**ಷರತ್ತುಗಳು**

1. ಸಂಘದ ದುಡಿಯುವ ಬಂಡವಾಳವನ್ನು ಷೇರು ಧನ ಸಂಗ್ರಹಿಸುವುದರ ಮೂಲಕ ಹೆಚ್ಚಿಸಿಕೊಳ್ಳುವುದು.
2. ಸಂಘದ ಸದಸ್ಯರುಗಳ ಹಿತಕ್ಕಾಗಿ ವಿಶೇಷವಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಘವನ್ನು ಆರ್ಥಿಕವಾಗಿ ಸದೃಢಗೊಳಿಸುವುದು.
3. ಸಂಘದ ಉಪ ನಿಯಮಗಳಲ್ಲಿರುವ ಉದ್ದೇಶಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.
4. ಕರ್ನಾಟಕ ಸಹಕಾರ ಸಂಘಗಳ ನಿಯಮ 17 ರಂತೆ ಸಂಘದ ಸಿಬ್ಬಂದಿಯ ವೃಂದಬಲ ಮತ್ತು ವೇತನ ಶ್ರೇಣಿಗಳನ್ನು ಇಲಾಖೆಯಿಂದ ಅನುಮೋದನೆ ಪಡೆಯುವುದು.
5. 2002-03 ರಿಂದ 2004-05ನೇ ಸಾಲುಗಳವರೆಗೆ ಲೆಕ್ಕ-ಪುಸ್ತಕಗಳನ್ನು ಆಡಿಟ್ ಮಾಡುವಂತೆ ಆಡಿಟ್ ಇಲಾಖೆಯಲ್ಲಿ ಮನವಿ ಮಾಡುವುದು.
6. ಸಂಘವು ಸಹಕಾರ ಸಂಘಗಳ ಕಾಯ್ದೆಯ ಕಲಂ 29 ಜಿ (6) ಯ ರೀತ್ಯಾ ನಿಗದಿಪಡಿಸಿರುವ ಮಾಹಿತಿಗಳನ್ನು ತಪ್ಪದೇ ಈ ಕಛೇರಿಗೆ ಸಲ್ಲಿಸತಕ್ಕದ್ದು.
7. ಸಂಘವು ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿಗಳ ಅವಕಾಶಗಳ ರೀತ್ಯಾ ನಿಗಧಿತ ಅವಧಿಯ ಒಳಗೆ ಸಂಘದ ಸರ್ವಸದಸ್ಯರ ಸಭೆ ಹಾಗೂ ಆಡಳಿತ ಮಂಡಳಿ ಸಭೆ ಮತ್ತು ಪದಾಧಿಕಾರಿಗಳ ಚುನಾವಣೆಯನ್ನು ನಡೆಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:17.01.2006 ರಂದು ನೀಡಿರುತ್ತೇನೆ.

**ಬಿ.ಸಿ. ಸತೀಶ್**

ಪಿ.ಆರ್. 152

ಸಹಕಾರ ಸಂಘಗಳ ಉಪನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ.